ಶ್ರೀಃ.

ಶ್ರೀ ಶಾರದಾಮ್ಬಾಯೈನಮಃ.

ಮಹಾಕವಿ ಕಾಳಿದಾಸಕೃತ ರಘುವಂಶ ಮಹಾಕಾವ್ಯವೇ

ಈ

# ರಘುಕುಲ ಚರಿತಂ

(೨ನೆಯ ಭಾಗ—೯ರಿಂದ ೧೧ ಸರ್ಗ)

ಶ್ರೀ ಶಿವಗಂಗಾ ಮಠದ

ಶ್ರೀ " ಶಾರದಾ " ಮಾಸಪತ್ರಿಕಾ ಸಂಪಾದಕರಿಂದ

ಬರೆಯಲ್ಪಟ್ಟು,



ಎಸ್. ಕೃಷ್ಣಯ್ಯರ್ ಬಿ. ಎ, ಯವರ " ಐರಿಷ್ " ಮುದ್ರಾಲಯದಲ್ಲಿ
ಮುದ್ರಣಂಗೊಂಡು ಪ್ರಚುರವಾದುದು.

1913.

 ಬೆಂಗಳೂರು. [ಕ್ರಯ [illegible] ಆಣೆ

# ಉ ಪ ಹಾ ರ

ಕನಡ, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಪೂರ್ಣ ಪಾಣ್ಡಿತ್ಯವನ್ನು ಪಡೆದು, ಶ್ರೀಮನ್ಮಹೀ ಶೂರ ಸಂಸ್ಥಾನದಲ್ಲಿ ವಿದ್ಯಾಭ್ಯಾಸದ ಇಲಾಖೆಯ ಇನಸ್ಪೆಕ್ಟರ್ ಜನರಲ್ ಪದವಿಯನ್ನು ಅಲಂಕರಿಸುತ್ತಾ, ದೇಶವತ್ಸಲರಾಗಿ, ಉದಾರಹೃದಯರೆನಿಸಿ, ಶಾಂತಿ, ಮಹತ್ವ, ರಾಜಭಕ್ತಿ, ಯಶಸ್ಸು, ರುಜುತ್ವ, ಏತದಾದ್ಯಸ್ಥಾನವಾಗಿರುವ ಶ್ರೀಮಾನ್. ಎಂ, ಶಾಮರಾಯರು, ಎಂ, ಎ, ಇವರು-ಕವಿಕುಲಲಲಾಮನಾದ ಕಾಳಿದಾಸ ಮಹಾಕವಿಯ ವಿಚಿತ್ರಸೃಷ್ಟಿಯಾಗಿರುವ ರಘುವಂಶ ಮಹಾಕಾವ್ಯದಲ್ಲಿನ ಮಧುರರಸವನ್ನು ಕನಡಿಗರು ಆಸ್ವಾದಿಸಿ ಆನಂದಿಸಲಿ, ಎಂಬದಾಗಿ ಅಪ್ಪಣೆ ಕೊಡಿಸಿದ್ದನ್ನು ಆದರ ಪೂರ್ವಕವಾಗಿ ಅಂಗೀಕರಿಸಿ, ಹತ್ತೊಂಭತ್ತು ಸರ್ಗಗಳ ಕಥೆಯನ್ನೂ ಕನಡ ಭಾಷೆಯಲ್ಲಿ ವಚನರೂಪದಿಂದ ಬರದಿದೇನೆ. ಚೀಫ್ ಇಂಜನಿಯರ್, ರಾಜಸಭಾ ಭೂಷಣಂ, ಶ್ರೀಮಾನ್ ಕಪೂರ ಶ್ರೀನಿವಾಸರಾವ್, ಬಿ, ಎಸ್, ಸಿ, ಎಲ್, ಸಿ, ಇ, ಇವರ ಅಪ್ಪಣೆಯನ್ನನುಸರಿಸಿ ಸಂಸ್ಕೃತ ವಚನರೂಪದಲ್ಲಿ ಬರೆಯಲು ಪ್ರಯತ್ನಿಸಿದೇನೆ. ಭ್ರಮಪ್ರಮಾದಗಳು ಮನುಷ್ಯ ಸಾಧಾರಣವಾಗಿರುವುದರಿಂದಲೂ, ಕೇವಲ ಗುಣಮಯವೇ ಆಗಿಯಾಗಲಿ, ಅಥವಾ ದೋಷಮಯವೇ ಆಗಿಯಾಗಲೀ, ಇರುವ ವಿಷಯವೇ ಇಲ್ಲದಿರುವುದರಿಂದಲೂ, ದೋಷಜ್ಞರು ಗುಣಾಂಶ ಗ್ರಹಣದಿಂದ ಸಂತೋಷಿಸಬೇಕು ಎಂದು ಪ್ರಾರ್ಥಿಸುವ,

ಪ ರಿ ವ ರ್ತ ನ ಕಾ ರ.



ಶ್ರೀ ಶಾರದಾಮ್ಬಾಯೈನಮಃ.

# ರಘುಕುಲ ಚರಿತಂ

[ಎರಡನೆಯ ಭಾಗ]

---

## ನವಮಾಧ್ಯಾಯಂ.



**ಸೂಚನೆ ॥ ಈರ್ಗೃದೇರಂ ಬನದೊಳ್ ।
ಸಾರುತೆ ಮುನಿವರ್ಯ ನಾತ್ಮ ಜಾತನ ನಿರಿದಂ ॥
ಮಾರಿಸಿ ಶಪಿಸಲ್ ಭರದಿಂ ।
ಮಾರ್ಗಾಯಂ ಮರುಗಿ ಸೇರ್ದ ನಮುಮಾ ಪುರಮಂ ॥**

ಅಜಮಹಾರಾಜನು ಕೀರ್ತಿಶೇಷನಾದನು. ಬಳಿಕ - ನಿಯಮ ಪರರೊಳಗೂ, ರಕ್ಷಕರೊಳಗೂ ಮೊದಲನೆಯವನೆನಿಸಿಕೊಂಡು, ಮಹಾರಥನೂ ಆದ ದಶರಥನು - ನೇಮದಿಂದ ಜಿತೇಂದ್ರಿಯನಾಗಿ, ತಂದೆಯಿಂದ ಬಂದ ಉತ್ತರ ಕೋಸಲ ದೇಶಗಳನ್ನು ಆಳಲಿಕ್ಕೆ ಆರಂಭಿಸಿದನು. ಹೀಗೆ ಕುಲಕ್ರಮಾಗತವಾಗಿ, ಪ್ರಜೆಗಳಿಂದೊಡಗೂಡಿರುವ ಜನಪದವನ್ನು ವಿಧಿಪ್ರಕಾರ ಪಡೆದು, ರಾಜನೀತಿಯನ್ನನುಸರಿಸಿ ಪಾಲಿಸುತ ಬರಲು, ಪುರ ಜನಪದ ಜನರೆಲ್ಲರೂ ಆತನನ್ನು ಬಹಳವಾಗಿ ಪ್ರೀತಿಸುತ ಬಂದರು. ಕುಮಾರಸ್ವಾಮಿಯಂತೆ ದಶರಥನು ಬಹು ತೇಜಸ್ವಿಯಾದನು. ಆಗ - ಸಮಯಾನುಸಾರವಾಗಿ ಮಳೆಗರೆವ ಮಹೇಂದ್ರನೊಬ್ಬ, ಮನುಮಹಾರಾಜನ ಮಾರ್ಗವನ್ನವಲಂಬಿಸಿರುವ ಅರ್ಥಪತಿಯಾದ ದಶರಥನೊಬ್ಬ, ಈ ಇಬ್ಬರನ್ನು ಮಾತ್ರವೇ, ವಿದ್ವಾಂಸರು -

ತಂತವನ್ನು ಉದ್ಘೋಷಿಸುತ್ತಿದ್ದ ಜನರ ಬಳಲಿಕೆಯನ್ನು ಪರಿಹರಿಸತಕ್ಕವರನ್ನಾಗಿ ಹೇಳುತಲಿದ್ದರು. ಶಮಪರನಾಗಿ, ಅಮರತೇಜಸ್ಸನ್ನು ಪಡೆದಿದ್ದ ಅಜನನ್ದನನು ರಾಜನಾಗಿರುವಲ್ಲಿ - ಆ ನಾಡಿನೊಳಗೆಲ್ಲಿಯೂ ರೋಗದ ಸುಳಿವೇ ಇರಲಿಲ್ಲ, ಹಗೆಗಳ ಹಾವಳಿಯು ಹುಟ್ಟೇ ಅಡಗಿದ್ದಿತು. ಧರೆಯು ಉರ್ವರೆಯೆನಿಸಿಕೊಂಡಿದ್ದಿತು. ಹಿಂದೆ ದಶದಿಗಂತಗಳನ್ನೂ ಜಯಿಸಿದ್ದ ರಘುರಾಜನಿಂದ ಧರೆಯ ಸಿರಿಯು ಮೆರೆಯುತಲಿದ್ದಿತಷ್ಟೆ? ಬಳಿಕ ಆ ರಘುನಂದನನಿಂದ ಮತ್ತಷ್ಟು ಮೇಲ್ಮೆಯನ್ನೈದಿತು. ಈಗ ಆ ಮಹಿಯೇ ಅಹೀನಪರಾಕ್ರಮನಾದ ದಶರಥಮಹಾರಾಜನಿಂದ ಮರಳಿ ಹೇರಳವಾದ ಐಸಿರಿಯನ್ನು ಪಡೆಯದೆ ಇರಲಿಲ್ಲ. ವಸುಮತೀಶನಾದ ದಶರಥನು - ಪ್ರಜೆಗಳಲ್ಲಿ ಸಮವರ್ತಿಯಾಗಿ, ವಸುವೃಷ್ಟಿಯನ್ನು ವಿನಿಯೋಗಿಸುತಲಿದ್ದುದರಿಂದಲೂ, ದುರುಳರನ್ನು ದಂಡಿಸುತ ಬಂದುದರಿಂದಲೂ, ವೈಶ್ರವಣ ವರುಣ ವೈವಸ್ವತರನ್ನು ಮೀರಿದ್ದನು. ಬೇಟೆಯಾಟವು - ವಿಳಗೆಗಾಗಿ ಯತ್ನಿಸುತಲಿರುವ ಆ ಇಳೆಯಾಣ್ಮನನ್ನು ಸೆಳೆಯಲಿಲ್ಲ, ದುರೋದರವು ಅಪಹರಿಸಲಿಲ್ಲ, ಶಶಿಯಂತೆಸೆವ ಮಧುವು ಆಕರ್ಷಿಸಲಿಲ್ಲ, ನವಯೌವನರಾದ ಯುವತಿಯರೂ ವಶಪಡಿಸಿಕೊಳ್ಳಲಿಲ್ಲ. ಆ ವಿಭುವು - ವೈಭವದಿಂದಿರುವಾಗ, ದೇವೇಂದ್ರನಲ್ಲಿಯೂ ದೈನ್ಯವನ್ನು ತೋರಲಿಲ್ಲ, ಪರಿಹಾಸ ಕಥೆಯಲ್ಲಿಯೂ ಅನೃತವನ್ನಾಡಲಿಲ್ಲ, ದೋಷರಹಿತನಾದ ಆ ರಾಜರ್ಷಿಯು - ದ್ವೇಷಿಗಳಲ್ಲಿಯೂ ಪರುಷವಚನವನ್ನು ನುಡಿಯಲಿಲ್ಲ, ಆ ರಘುಧುರಂಧರನು - ಅವಿಧೇಯರಾದ ದುರ್ಹೃದಯರಿಗೆ ಅಯೋಹೃದಯನಾಗಿಯೂ, ವಿಧೇಯರಾಗಿ ಇದಿರಿಸದಿರುವ ಸುಹೃದಯರಿಗೆ ಸಹೃದಯನಾಗಿಯೂ ಇರುತ್ತಿದ್ದನು, ಈ ಕಾರಣದಿಂದಲೇ ಆಗ-ವಸುಧಾಧಿಪರು ಉದಯಾಸ್ತಮಯಗಳೆರಡನ್ನೂ ಕ್ರಮವಾಗಿ ಪಡೆಯುತಲಿದ್ದರು, ಹೆದೆಯನೇರಿಸಿದ ಬಿಲ್ಲನ್ನು ಹಿಡಿದು ಆ ಅಜನಂದನನು - ತಾನು ದಶರಥನಾದರೂ ಏಕರಥದಿಂದಲೇ ಸಾಗರದಿಂದ ಸುತ್ತಲ್ಪಟ್ಟಿರುವ ಮೇದಿನಿಯನ್ನೆಲ್ಲ ಜಯಿಸಿದನು, ತೀವ್ರಜವದ ಗಜವಾಜಿ ಮೊದಲಾದವುಗಳ ರಾಜಿಯು -ಆತನ ಜಯವನ್ನು ಮಾತ್ರ ಉದ್ಘೋಷಿಸತಕ್ಕುದಾಗಿದ್ದಿತು. ಇದಿರಿಲ್ಲದ ರಥದಿಂದ ಪೃಥುವಿಯನ್ನೆಲ್ಲ ಜಯಿಸಿ, ಧನದನ ಸಂಪದವನ್ನು

ಪಡೆದ ಧನುರ್ಧರನಾದ ಆ ಧರಾನಾಥನಿಗೆ ಮೇಘದಂತೆ ಗರ್ಜಿಸುವ ಉವಧಿಯೇ ಜಯದುಂದುಭಿಯ ಕೆಲಸವನ್ನು ಮಾಡತಕ್ಕದಾಗಿದ್ದಿತು, ಶತಮುಖನು - ಶತಕೋಟಿಯಾದ ಕುಲಿಶದಿಂದ ಶೈಲಪಕ್ಷವನ್ನೆಲ್ಲ ಶಾಂತಿಗೊಳಿಸಿದಹಾಗೆ, ಶತಪತ್ರಮುಖನಾದ ದಶರಥನು-ಶರವರ್ಷವನ್ನು ವರ್ಷಿಸುತ ಟಂಕಾರದಿಂದೊಡಗೂಡಿದ್ದ ಶರಾಸನದಿಂದ ಶತ್ರುಪಕ್ಷವನ್ನು ಶಮನಮಾಡಿದನು, ದಶರಥನ ಚರಣನಖಮಯೂಖಗಳಿಂದ ಹೆಚ್ಚಿದ ಮುಕುಟರತ್ನಮರೀಚಿಗಳಿಂದ. ನರಪತಿಗಳು - ಸುರರು ಅಖಂಡಿತ ಪೌರುಷನಾದ ಶತಕ್ರತುವಿನ ಅಡಿದಾವರೆಗಳನ್ನು ಹೇಗೋಹಾಗೆ, ಚರಣನಳಿನಗಳನ್ನು ಸ್ಪರ್ಶಮಾಡುತಲಿದ್ದರು.

ಇಂತಪ್ಪ ದಶರಥನೊಂದುವೇಳೆ ದಿಗ್ವಿಜಯಕ್ಕೆ ಹೊರಟು, ಕಡಲ ತಡಿಯುವರೆಗಿರುವ ನಾಡುಗಳೊಡೆಯರನ್ನೆಲ್ಲ ಸದೆಬಡಿದನು. ಆಯಾಯ ದೇಶಗಳ ಸಚಿವರರು - ಎಳೆಯುವರಾದ ಆಯಾ ರಾಜಕುಮಾರರಿಂದ ಅಂಜಲಿಗಳನ್ನು ಒಪ್ಪಿಸಿದರು, ಅರಸು - ಮುಂದಲೆಯ ಮಂಗಳಚೂರ್ಣವಿಲ್ಲದ, ಆ ಹಸುಳೆಗಳ ತಾಯಿಯರಲ್ಲಿ ಧರ್ಮದಿಂದ ದಯೆತೋರಿ, ಮರಳಿ ಹಿಂಸಿಸದೆ, ಸಮುದ್ರತೀರಗಳಿಂದ ಹಿಂದಿರುಗಿದನು, ಇದಿರಿಗೆ ಕೊಡೆಹಿಡಿಯುವ ಅರಸಿಲ್ಲದಂತೆಸಗಿ, ದ್ವಾದಶರಾಜಮಂಡಲಾಧಿಪತ್ಯವನ್ನು ಪಡೆದರೂ, ,, ಸಿರಿಯು ಸಂದನ್ನು ಕಂಡು ಸರಿಯುವಳು ,, ಎಂದು ಅರಿತು, ಹಿತಾಹಿತರಾದ ಸುಜನದುರ್ಜನರಲ್ಲಿ ಚಂದ್ರಸೂರ್ಯರಂತೆ ಬೆಳಗುತ್ತಾ, ಅನ್ಯಾಯಾಲಸ್ಯಾದಿಗಳಿಗಾಸ್ಪದವಿಲ್ಲದೆ ಎಚ್ಚರದಿಂದಿರುತ್ತಿದ್ದನು, ಪತಿವ್ರತೆಯಾಗಿದ್ದ ಕಮಲಹಸ್ತೆಯಾದ ಕಮಲೆಯು - ಪುರಾಣಪುರುಷನಾದ ವಿಷ್ಣುವನ್ನೂ, ಆತನ ಅಂಶದಿಂದ ಕಕುತ್ಸ್ಥ ಕುಲಕುಮಾರನಾಗಿ, ಯಾಚಕರಲ್ಲಿ ವಿಮುಖನಾಗದಿರುವ ದಶರಥನನ್ನೂ ಹೊರತು, ಮತ್ತಾವ ಅರಸನನ್ನೂ ಸೇವಿಸಲಿಲ್ಲ

ಹೀಗಿರುವಲ್ಲಿ - ಪತಿಯನ್ನು ದೇವರನ್ನಾಗಿಯೇ ಭಾವಿಸುವವರೆನಿಸಿದ್ದ, ಕೋಸಲ, ಮಗದ, ಕೇಕಯ ದೇಶಾಧೀಶರ ಕುವರಿಯರು - ಶೈಲಸುತೆಯರಾದ ಸರಿತ್ತುಗಳು - ಸಾಗರವನ್ನು ಹೇಗೋಹಾಗೆ, ಶತ್ರುಗಳನ್ನಡಗಿಸುವ ಶರಾಸನವನ್ನಾಂತಿರುವ ದಶರಥನನ್ನುದಯಿತನನ್ನಾಗಿ

ಪಡೆದರು. ಪ್ರಿಯತಮೆಯರೆನಿಸಿದ ಮೂವರಾದ ಆ ಅರಸಿತಿಯರಿಂದ ಆ ಧರಾನಾಥನು - ಅರಿಗಳನ್ನಿರಿಯುವ ಉಪಾಯಗಳಲ್ಲಿ ದಕ್ಷನಾದ ಸಹಸ್ರಾಕ್ಷನು - ಮೂರು ಶಕ್ತಿಗಳಿಂದೊಡಗೂಡಿ, ಪ್ರಜೆಗಳನ್ನು ವಿನಯ ಸಂಪನ್ನರಾಗಿಮಾಡಲು, ತಿರೆಗಿಳಿದಿರುವನೆಂಬಂತೆ ಬೆಳಗುತಲಿದ್ದನು. ಒಂದು ಸಮಯ - ಮಹಾರಥನಾದ ಮಹಾರಾಜನು - ಸಮರಾಂಗಣ ದಲ್ಲಿ, ಮಘವಂತನಿಗೆ ಸಹಾಯಕನಾಗಿ ತೆರಳಿ, ಶರಗಳಿಂದ ಅಸುರರನ್ನು ಇರಿದನು, ಅಭಯವನ್ನು ಪಡೆದ ಅಮರಾಂಗನೆಯರು - ದಶರಥನ ತೋಳುಬಲವನ್ನು ಗಂಭೀರವಾಗಿ ಗಾನಮಾಡಿದರು. ಭುಜಬಲದಿಂದ ದಿಗಂತಗಳಲ್ಲಿ ಆರ್ಜಿಸಿದ ಅಧಿಕಸಂಪದವನ್ನೊಳಗೊಂಡಿರುವ ಅಜನಂದ ನನು - ಅನೇಕವೇಳೆ ರಾಜಚಿಹ್ನೆಯನ್ನು ತೆಗೆದಿಟ್ಟು, ತಮೋಗುಣಕ್ಕೆ ಡೆಗುಡದೆ, ತಮಸಾ ಸರಯೂ ತೀರಗಳಲ್ಲಿ, ಅಶ್ವಮೇಧಗಳನ್ನಾಚರಿಸಿ, ಕನಕಾಲಂಕಾರ ಸಂಶೋಭಿತವಾದ ಯೂಪಸ್ತಂಭಗಳನ್ನು ನಟ್ಟನು, ಔದುಂಬರ ದಂಡವನ್ನೂ, ಮೃಗಶೃಂಗವನ್ನೂ ಹಿಡಿದು ಕುಶಮಯವಾದ ಮೌಂಜಿಯನ್ನು ಧರಿಸಿ, ದೀಕ್ಷೆಗೊಂಡು, ಮೌನದಿಂದ ಕೃಷ್ಣಾಜಿನದ ಮೇಲೆ ಯಜ್ಞವಾಟದೊಳಗೆ ಯಜಮಾನನಾಗಿ ಕುಳಿತಿರುವಾಗ - ಪರಮೇಶ್ವರನು - ಆತನಲ್ಲಿ ಸಾನ್ನಿಧ್ಯವನ್ನು ತೋರಿ, ಬಹು ತೇಜಸ್ವಿಯನ್ನಾಗಿ ಮಾಡುತಲಿದ್ದನು. ಜಿತೇಂದ್ರಿಯನಾಗಿ, ಯಜ್ಞಗಳ ನ್ನಾಚರಿಸಿ, ಕಡೆಯಲ್ಲಿ ಅವಭೃಥವೆಂಬ ಮಂಗಳಸ್ನಾನವನ್ನು ಮಾಡುವ ಸಂದರ್ಭದೊಳಗೆ - ಶಕ್ರಸಮಾಜವನ್ನು ಆಕ್ರಮಿಸಲು ತಕ್ಕವನೆನಿಸಿದ್ದ ದಶರಥನು - ದೇವೇಂದ್ರನಿಗೆ ಮಾತ್ರವೇ ತಲೆಯನ್ನು ತಗ್ಗಿಸುತ್ತಿದ್ದನು. ಏಕರಥನಾಗಿದ್ದ ಮಹಾಬಲಶಾಲಿಯಾದ ಈ ದಶರಥನು - ಚಾಪಧರನಾಗಿ ಹರಿಹಯನಿಗೆ ಮುಂದಲಾಳೆನಿಸಿ, ಅನೇಕಸಾರಿ ಅಸುರಾಳಿಯೊಡನೆ ಹೋರಾಡುವಾಗ - ರವಿಮಂಡಲವನ್ನು ಮುಚ್ಚುತಲಿರುವ ರಣಧೂಳಿಯನ್ನು, ಹಗೆಗಳ ಮೆಯ್ಯಿಂದಿಳಿದ ರಕ್ತಧಾರೆಗಳಿಂದ ಪರಿಹರಿಸು ತಲಿದ್ದನು.

ಆ ಬಳಿಕ - ಸಮದೃಷ್ಟಿಯಲ್ಲಿ ಯಮನನ್ನೂ, ಧನದಾನದಲ್ಲಿ ಕುಬೇರನನ್ನೂ, ನೇಮದಲ್ಲಿ ಈಶ್ವರನನ್ನೂ, ಐಶ್ವರ್ಯದಲ್ಲಿ ಇಂದ್ರನನ್ನೂ

ಹೋಲುತಲಿರುವ ಚಕ್ರವರ್ತಿಯೆನಿಸಿದ ದಶರಥ ಮಹಾರಾಜನನ್ನು ದರ್ಶನಮಾಡಬೇಕೆಂದೆಳಸಿರುವನೆಂಬಂತೆ ವಸಂತನು - ನವಕುಸುಮೋಪಹಾರದಿಂದ ಬೆಳಗುತ್ತ ಆ ನಾಡಿಗೈತಂದನು. ಅದುವರೆಗೆ ತೆಂಕಲದೆಸೆಯನ್ನಲಂಕರಿಸಿದ್ದ ರವಿಯು - ಕುಬೇರನಿಗೆಡೆಯಾದ ಬಡಗದಿಕ್ಕಿಗೆ ತೆರಳಬೇಕೆಂದೆಳಸಿ, ಸಾರಥಿಯಾದ ಅರುಣನಿಂದ ತೇರಿನ ಕುದುರೆಗಳನ್ನು ತಿರುಗಿಸಿ, ಹಿಮವನ್ನಡಗಿಸುವುದರಿಂದ ಮುಂಜಾನಗಳನ್ನು ಬೆಳಗಿಸುತ್ತಾ, ಮಲಯಪರ್ವತವನ್ನು ಬಿಟ್ಟನು, ಮೊದಲು ತಳಿರು, ಆಮೇಲೆ ಹೂವು, ತರುವಾಯ ಆರಡಿ ಮತ್ತು ಕೋಗಿಲೆಗಳ ಇಂಪಾದ ದನಿ, ಈ ಕ್ರಮವನ್ನು ಅನುಸರಿಸಿದ ಮರಗಿಡಬಳ್ಳಿಗಳ ಗುಂಪಿನಿಂದ ಬೆಳಗುತಲಿರುವ ವನಸ್ಥಲಿಯಲ್ಲಿ, ವಸಂತನು ಮೈದುಂಬಿ ಕಂಗೊಳಸುತ್ತಿದ್ದನು, ವಿನಯದಿಂದಲೂ, ಶೌರ್ಯಾದಿ ಗುಣಗಳಿಂದಲೂ ಏಳಿಗೆಗೆ ಬಂದು, ಪರೋಪಕಾರವನ್ನೇ ಫಲವನ್ನಾಗಿ ಪಡೆದಿರುವ ದಶರಥನ ಸಿರಿಯನ್ನು, ಅರ್ಥಿಗಳು ಆಶ್ರಯಿಸುವಹಾಗೆ, ವಸಂತನು ಚೆನ್ನಾಗಿ ಪೋಷಿಸಿರುವ ಕಮಲಿನಿಯನ್ನು, ಅಳಿಗಳೂ, ಜಲಪಕ್ಷಿಗಳೂ ಅನುಸರಿಸತೊಡಗಿದುವು. ಅಶೋಕತರುಗಳೊಳಗೆ ತಳಿರುಗಳೂ, ಕುಸುಮಗಳೂ ನೋಟಕರ ಕಣ್ಮನಗಳನ್ನು ಸೆಳೆಯುತಲಿದ್ದುವು. ವಸಂತನು - ವನಲಕ್ಷ್ಮಿಯ ಕಪೋಲಗಳಲ್ಲಿ ಹೊಸದಾಗಿ ಬರೆದ ಚಿತ್ರಗಳೆಂಬಂತಿರುವ ಗೋರಂಟಿ ಗಿಡಗಳ ಹೂಗಳೊಳಗೆ ಬಂಡನ್ನು ಕುಡಿದ ದುಂಬಿಗಳು - ತಣಿದು, ಸಂತಸದಿಂದ ಆ ವನದೇವತೆಯನ್ನು ಕೊಂಡಾಡುತಲಿವೆಯೋ ಎಂಬಂತೆ ಎಲ್ಲೆಲ್ಲಿಯೂ ಇಂಪಾಗಿ ದನಿಗೆಯ್ಯುತಲಿದ್ದುವು. ಕಾಮಿನಿಯಂತಿರುವ ಸಿಹಿಮಾವಿನ ಗಿಡದ ಕೊನೆಯು-ಮಲಯಪರ್ವತದಿಂದ ಹರಿದುಬರುವ ಮಂದಮಾರುತದಿಂದ ಅಲುಗುತ್ತಾ, ಕರತಲದಂತಿರುವ ತಳಿರುಗಳಿಂದ ಅಭಿನಯ ವಿದ್ಯೆಯನ್ನು ಕಲಿಯುತಲಿರುವಂತೆ ಕಾಣಬಂದು, ರಾಗದ್ವೇಷವಿಲ್ಲದವರ ಮನವನ್ನೂ ಸೆಳೆಯುತಲಿದ್ದಿತು. ವಸಂತಋತುವಿನ ಆದಿಭಾಗದಲ್ಲಿ - ಸುವಾಸನೆಯನ್ನೊಳಗೊಂಡಿರುವ ಸಿಹಿಮಾವಿನ ಗಿಡಗಳ ಸಾಲುಗಳೊಳಗೆ, ತಳಿರುಗಳನ್ನು ತಿಂದು, ಕೊಬ್ಬಿ, ಕೂಗುತಲಿರುವ ಪರಭೃತಗಳ ರುತಗಳು - ಮುದ್ದುಮಕ್ಕಳ ತೊದಲು ನುಡಿಗಳಂತೆ ಇಂಪಾಗಿ ಕೇಳ

ಬರುತಲಿದ್ದುವು. ಭ್ರಮರಗಳ ಶ್ರುತಿ ಮಧುರವಾದ ಧ್ವನಿಗಳೆಂಬ ಮಂಗಳಗೀತಗಳು - ಕೋಮಲಗಳಾದ ಕುಸುಮಗಳೆಂಬ ಹಲ್ಲುಗಳಿಂದೊಡಗೂಡಿರುವ ಹುಸಿನಗೆಯುನ್ನೊಳಗೊಂಡು, ಉಪವನಲತೆಗಳೆಂಬ ನರ್ತಕಿಯರು - ಗಾಳಿಯಿಂದ ಅಲುಗುತ, ಬಂದರೊಡನೊಂದು ತಗಲುವ ತಳಿರುಗಳಿಂದ, ಕರತಾಳ ಲಯಗಳನ್ನನುಸರಿಸಿದ ಹಾಡುಗಳನ್ನು ಹೇಳುತಲಿರ್ಪವಂತೆ ಕೇಳಬರುತ್ತಿದ್ದುವು. ಮನೆಗಳೊಳಗಣ ಕೊಳಗಳು - ಅಂದವಾಗಿ ಅರಳಿರುವ ತಾವರೆಗಳನ್ನೊಳಗೊಂಡು,ನೀರಿನಮೇಲೆ ದನಿಗೆಯ್ಯುತ ತೇಲಾಡುತಲಿರುವ ನೀರುಹಕ್ಕಿಗಳಿಂದ ರಮಣೀಯಗಳಾಗಿ ಕಾಣಬರುತ್ತಿದ್ದುವು. ಆಜ್ಯವೇ ಮೊದಲಾದವುಗಳ ಆಹುತಿಗಳಿಂದ ಪ್ರಜ್ವಲಿಸುವ ಅಗ್ನಿಯಂತೆ ಕಾಂತಿಯುನ್ನೊಳಗೊಂಡ ಕರ್ಣಿಕಾರ ಕುಸುಮಗಳು - ವನಲಕ್ಷ್ಮಿಗೆ ಶೃಂಗರಿಸಿದ ಸುವರ್ಣಾಭರಣದಂತೆ ಸಂಶೋಭಿಸುತಲಿದ್ದುವು. ತಳಿರುಗಳಿಂದ ಸಹಿತವಾದ ಹೂಗಳನ್ನು ತಂತಮ್ಮ ಪ್ರಿಯರು ತಂದುಕೊಡಲು, ಸುಮಂಗಲಿಯರವನ್ನು ತಲೆಗಳಲ್ಲಿ ಅಂದವಾಗಿ ಮುಡಿಯುತಲಿದ್ದರು. ಮಕರಂದದಾಸೆಯಿಂದ ಬಂದೆರಗುವ ದುಂಬಿಗಳಿಂದೊಡಗೂಡಿದ ಶ್ರೀಕುಸುಮಗಳು - ವನಲಕ್ಷ್ಮಿಯರ ಹಣೆಗಳೊಳಗಿಟ್ಟ ತಿಲಕಗಳ ಸೊಬಗನ್ನು ಉಂಟುಮಾಡುತಲಿದ್ದುವು. ಗಂದುಡಿಯಿಂದ ತುಂಬಿ, ದುಂಬಿಗಳನ್ನೊಳಗೊಂಡಿರುವ ತಿಲಕತರುವಿನ ಹೂಗೊಂಚಲು - ವನಲಕ್ಷ್ಮಿಯ ಬೈತಲೆಯ ಪಕ್ಕದ ಮುಂದಲೆಗೆ ಸಿಂಗರಿಸಿರುವ ಜಾಲರವೆಂಬ ಒಡವೆಯ ಬೆಡಗನ್ನಾಂತಿದ್ದಿತು. ತೋಟದಲ್ಲಿ ಹಾರಾಡುವ ದುಂಬಿಗಳ ಹಿಂಡು - ಬಿಲ್ಲಾಳಾದ ಕಾಮನೆಂಬ ಅರಸಿಗೆ ಎತ್ತಿಹಿಡಿದ ದಾಳಿನ ಬೆಡಗನ್ನೂ, ವನಲಕುಮಿಯ ಹಣೆಗಿಡುವ ಕತ್ತುರಿಯ ಹುಡಿಯ ತಿಲಕದ ಪರಿಯನ್ನೂ, ಗಾಳಿಯಿಂದ ಅಲುಗುತಲಿರುವ ಗಿಡಗಳ ಹೂಗಳೊಳಗಣ ಪರಿಮಳದ ಪುಡಿಯ ಬಗೆಯನ್ನೂ ತಳೆಯುತಲಿದ್ದುವು. ಹೆಂಗಳು - ಉಪವನಗಳೊಳಗೆ ಅಲ್ಲಲ್ಲಿ ವಸಂತೋತ್ಸವಗಳನ್ನು ಅನುಭವಿಸಿ, ಉಯ್ಯಾಲೆಯ ಮಣೆಗಳಮೇಲೆ ಕುಳಿತು, ಸುಖವಾಗಿ ತೂಗಿಕೊಳ್ಳುತಲಿದ್ದರು. ಮಧು, ಮಧುಮಥನ, ಮನ್ಮಥರಿಗೆಣೆಯೆನಿಸಿದ ದಶರಥ ಭೂನಾಥನೂ - ತನ್ನ ಅರಸಿತಿಯರೊಡನೆ ಉದ್ಯಾನವನದಲ್ಲಿ, ವಸಂತ

ಮಹೋತ್ಸವಗಳನ್ನು ಸುಖವಾಗಿ ಅನುಭವಿಸಿ, ಬಳಿಕ ಮೃಗಯಾವಿಹಾರವನ್ನು ಬಯಸಿದನು.

ಆದರೆ - ಬೇಟೆಯೆಂಬುದು ಏಳು ಬಗೆಯಾಗಿರುವ ವ್ಯಸನಗಳೊಳಗೆ ಬಂದೆನಿಸಿರುವುದರಿಂದ ಅದನ್ನು ದುಷ್ಟವೆಂದೇ ಹೇಳಬೇಕು, ಆದರೂ ಅದರಲ್ಲಿ ಗುಣವಿದೆ_ಈ ಮೃಗಯಾವಿನೋದವು - ಅಲುಗುತಲಿರುವ ಗುರಿಯನ್ನು ಸರಿನೋಡಿ ಹೊಡೆದು ಕೆಡಹುವ ಗಟ್ಟಿಗತನದ ಪರಿಚಯವನ್ನು ಮಾಡಿಕೊಡುತದೆ. ಮೃಗಗಳು ಭಯದಿಂದೊಡಗೂಡಿರುವಾಗಲೂ, ರೋಷದಿಂದಿರುವಾಗಲೂ ಅವುಗಳ ಇಂಗಿತವು ತಿಳಿಯ ಬರುವುದು. ಶರೀರಕ್ಕೆ ಬಳಲಿಕೆಯನ್ನು ಸಹಿಸುವ ಅಭ್ಯಾಸನಿಂದ ಲವಲವಿಕೆಯನ್ನೂ ಉಂಟುಮಾಡುವುದು. ಈ ಕಾರಣದಿಂದಲೇ ಮಂತ್ರಿಗಳು - ಅದೆಲ್ಲವೂ ಕಾಳಗಕ್ಕೆ ಉಪಯೋಗವೆಂದು, ದೊರೆಯ ಕೋರಿಕೆಯನ್ನು ಒಪ್ಪಿದರು. ಹಾಗೆ ಅವರ ಸಮ್ಮತಿಯನ್ನು ಪಡೆದು ದಶರಥನು ಹೊರಟನು. ಮಿಕಗಳ ಕಾಡನ್ನು ಕುರಿತು ಹೊರಡುವ ಸಡಗರದಲ್ಲಿ, ಆಖೇಟಕ್ಕೆ ತಕ್ಕ ವೇಷವನ್ನು ತಾಳ್ದು, ಕುದುರೆಯಮೇಲೆ ಕುಳಿತು, ಹೆಗಲಮೇಲೆ ಬಿಲ್ಲನ್ನಿಟ್ಟನು. ಅಶ್ವಖುರದಿಂದೆದ್ದ ಧೂಳಿಯೆಂಬ ತೆರೆಯಿಂದ ಆಗಸದಲ್ಲಿ ರವಿಯು ಬಿಸುವನ್ನು ಮುಚ್ಚಿದನು. ಕಾಡು ಹೂಗಳ ಸರದಿಂದ ತಲೆಗೂದಲನ್ನು ಏರಗಟ್ಟಿದನು. ಗಿಡದೆಲೆಯಂತೆ ಹಸಿರು ಬಣ್ಣದ ಕವಚವನ್ನು ತೊಟ್ಟನು. ಕುದುರೆಯ ನಡಗೆಯಿಂದ ಕಿವಿಯ ಕಡಕುಗಳು ಅಲುಗುತಲಿದ್ದುವು. ಹುಲ್ಲೆ ಮೊದಲಾದ ಜಂತುಗಳಿಂದ ತುಂಬಿದ ಕಾಡುದಾರಿಯಲ್ಲಿ ಧರಾನಾಥನು ಕಂಗೊಳಿಸುತಲಿದ್ದನು.

ಆಗ - ವನದೇವತೆಗಳು - ಕಾಡುಬಳ್ಳಿಗಳೊಳಗೆ ತಮ್ಮ ದೇಹಗಳನ್ನು ಅಡಗಿಸಿ, ದುಂಬಿಗಳೊಳಗೆ ನೋಟದ ಶಕ್ತಿಯನ್ನಿಟ್ಟು, ರಾಜನೀತಿಯಿಂದ ನಾಡಿನ ಜನರನ್ನು ಸಂತಸಗೊಳಿಸುತ, ಪ್ರಸನ್ನನೂ, ಪಾವನನೂ ಆಗಿರುವ ನರನಾಥನನ್ನು ನೋಡುತಲಿದ್ದರು.

ದೊರೆಯು - ತಾನು ಹೊರಡುವುದಕ್ಕಿಂತ ಮೊದಲೇ, ಕಾಡನ್ನು ಬೇಟೆನಾಯಿಗಳವರು,ಬಲೆಗಾರರು,ಕಾಡ್ಗಿಚ್ಚು,ಕಳ್ಳಕಾಕರೂ ಇಲ್ಲದಂತೆ

ಅಣಿಮಾಡಿಸಿದ್ದನು. ಕುದುರೆಯ ಸಂಚಾರಕ್ಕೆ ಹಾದಿಯನ್ನು ಸರಿಪ ಡಿಸಿದ್ದನು. ಅಲ್ಲಲ್ಲಿ ಜಲವಸತಿಯನ್ನು ಕಲ್ಪಿಸಿದ್ದನು, ಬಳಿಕ ಹುಲ್ಲೆ ಮೊದಲಾದ ಮೃಗಗಳಿಂದಲೂ, ಪಕ್ಷಿಗಳಿಂದಲೂ ತುಂಬಿರುವ ಆ ವನವನ್ನು ಹೊಕ್ಕನು. ತರುವಾಯ - ಯಾವುದೊಂದು ಕೊರತೆಯೂ ಇಲ್ಲದೆ, ಟಂಕಾರದಿಂದ ಕೇಸರಿಗಳಿಗೆ ರೋಷವನ್ನುಂಟುಮಾಡುವ ನರ ವರನು - ಚಿನ್ನದಂತೆ ತಳತಳನೆ ಹೊಳೆವ ಮಿಂಚೆಂಬ ಹೆದೆಯಿಂದೊಡ ಗೂಡಿದ ಇಂದ್ರಚಾಪವನ್ನು ತಳೆವ ಭಾದ್ರಪದ ಮಾಸದಂತೆ, ಮೌರ್ವಿ ಯಿಂದ ಸಹಿತವಾದ ಚಾಪವನ್ನು ಕಯ್ಯಲ್ಲಿ ಎತ್ತಿಹಿಡಿದನು. ಅಷ್ಟು ಹೊತ್ತಿಗೆ ಸರಿಯಾಗಿ, ಒಂದು ಹುಲ್ಲೆಗಳ ಹಿಂಡು ಇದಿರಿಗೆ ಸುಳಿಯಿತು. ಅದರೊಳಗೆ, ಕೆಲವು ಎಳೆಮರಿಗಳು- ತಂತಮ್ಮ ತಾಯ ಕೆಚ್ಚಲಲ್ಲಿ ಹಾಲು ಕುಡಿವ ಸಡಗರದಲ್ಲಿ, ಅಡಿಗಡಿಗೂ ಕಾಲುಗಳಿಗೆ ತೊಡರಿ, ನಡೆಗೆಗೆ ಎಡೆ ಗುಡದಿದ್ದುವು. ಮತ್ತೆ ಕೆಲವು - ಬಾಯ್ಗಳಿಂದ ದರ್ಭೆಯ ಹುಲ್ಲನ್ನು ಕಡಿಯುತಲಿದ್ದುವು. ಇನ್ನು ಕೆಲವು-ತಿಂದು ಕೊಬ್ಬಿ ನೆಲದಲ್ಲಿ ಗೊರಸ ನ್ನೂರುವುದೇ ಅರಿವಿಗೆ ಬಾರದಹಾಗೆ ಹಾರಾಡುತಲಿದ್ದುವು ಆಗಲಾ ವಸುಮತೀಶನು - ಬಯಸಿದ ಹೊತ್ತಿಗೆ ಸರಿಯಾಗಿ ಇದಿರಿಗೆ ಬಂದ ಜಿಂಕೆಯ ಹಿಂಡನ್ನು ಕಂಡಕೂಡಲೆ, ಬಹು ತ್ವರೆಯಿಂದೊಡಗೂಡಿ, ವೇಗಶಾಲಿಯಾದ ವಾಜಿಯಮೇಲ ಕುಳಿತಿದ್ದವನಾಗಿಯೇ, ಬತ್ತಳಿಕೆ ಯಿಂದ ಬಾಣವನ್ನು ಹಿರಿದು ಹೆದೆಯಲ್ಲಿಡತೊಡಗಿದನು ಅದನ್ನು ನೋ ಡಿದ ಹುಲ್ಲೆಗಳು-ಅಂಜಿ, ಚೆದರಿ, ತಲೆಯನ್ನೆತ್ತಿ, ಸೀರುತುಂಬಿ ಚಲಿಸುತ ಲಿರುವ ದೃಷ್ಟಿಗಳನ್ನು ಒಟ್ಟಿಗೆ ಆಗಸದ ಬೈಲಿನಲ್ಲಿ ಹರಡಿದುವು, ಆಗಲಾ ಕಾಡು- ಅರಳಿ, ಹರಡಿ, ಗಾಳಿಯಿಂದಲುಗುತಲಿರುವ ತಂಪಾದ ಕನ್ನೈದಿ ಲೆಗಳಿಂದೊಡಗೂಡಿದಂತೆ ಕಪ್ಪಾಗಿ ಕಂಗೊಳಿಸುತಲಿದ್ದಿತು, ಬಿಲ್ಲಾಳುಗ ಳೊಳಗೆ ಹರಿಯಂತೆ ಹೆಸರುವಾಸಿಯನ್ನು ಪಡೆದಿರುವ ತಿರೆಯಾಣ್ಮ ನೊಂದು ಹರಿಣವನ್ನು ಗುರಿಹಿಡಿದು ಹೊಡೆಯಲಿಕ್ಕಣಿಯಾದನು. ಹರಿಣಿ ಯೊಂದು ತನ್ನಿನಲ್ಲಿರುವ ಅನುರಾಗದಿಂದ ಅಂಬಿನಪೆಟ್ಟು ಅದಕ್ಕೆ ಬೀಳದ ಹಾಗೆ ತನ್ನ ಮೆಯ್ಯನ್ನು ಮರೆಮಾಡಿ ನಿಂತಿತು. ಬಾಣವನ್ನು ಬಿಡಲು ಕಿವಿಯವರೆಗೂ ಹೆದೆಯನ್ನು ಸೆಳೆದಿದ್ದ ದೊರೆಯು - ಅದನ್ನು ಕಂಡನು,

ಅಹಹಾ !! ಮೃಗಗಳಲ್ಲಿಯೂ ಇಂತಪಾರವಾದ ದಾಂಪತ್ಯಾನುರಾಗವು ನೆಲೆಗೊಂಡಿರುವುದಲ್ಲಾ ಎಂದು ನೆನೆದು, ಅರಸಿನ ಎದೆಯು ಕರುಣೆಯಿಂದ ಮೃದುವಾಗಿ ಕರಗಿತು, ಹೊಡಿಯಲಿಕ್ಕೆಳಸದೆ, ಕೂಡಲೆ ಶರವೆಲ್ಲಿ ಮುಂದರಿದು ಹರಿಣವನ್ನು ಇರಿವುದೋ ಎಂದು ಅಂಜಿ, ಕರಲಾಘವದಿಂದ ತೊಟ್ಟ ಬಾಣವನ್ನು ಬಲುಬೇಗನೆ ಇಳಿಸಿದನು, ಉಳಿದ ಮಿಗಗಳೂ ಹೆದರಿ, ಬಲು ಚಪಲಗಳಾದ ತಮ್ಮ ದೃಷ್ಟಿಗಳನ್ನು ಅರಸಿನಲ್ಲಿ ನಟ್ಟುವು, ದೊರೆಗೆ ಹೋಲಿಕೆಯಿಂದ ತನ್ನ ಪ್ರಿಯಸತಿಯರ ನಯನಗಳ ಬೆಡಗು ನೆನಪಿಗೆ ಬಂದಿತು, ಅವುಗಳಲ್ಲಿಡಬೇಕೆಂದು ಬಲವಾಗಿ ತೊಟ್ಟಿದ್ದ ಅಂಬನ್ನು ಪಟ್ಟಾಗಿ ಹಿಡಿದಿದ್ದ ಹಿಡಿಯು- ಮುಂದರಿಯಲಾರದೆ ಕನಿಕರದಿಂದ ತಾನಾಗಿ ಸಡಲಿ ಕೆಳಗೆ ಸರಿಯಿತು

ಅಲ್ಲಿಂದ ಮತ್ತೊಂದುಕಡೆಗೆ ತಿರುಗಿದನು, ಕೊಳಗಳ ನಡುವೆ ಇಳಿಯಬಿದ್ದಿದ್ದ ಕಾಡುಹಂದಿಗಳ ಹಿಂಡು ಪೊಡವಿಯೊಡೆಯನಂ ಕಂಡ ಕೂಡಲೆ ಮೇಲೆಬಂದು ದುಡದುಡನೆ ಓಡಿದುವು, ಬಳಲಿಕೆಯಿಂದರಳಿದ ಬಾಯ್ಗಳಿಂದ ತುಂಗೆಗಡ್ಡೆಯ ಮೊಳಕೆಗಳು ದಾರಿಯುದ್ದಕ್ಕೂ ಉದುರಿದ್ದುವು, ಮತ್ತು - ಕೆಸರಿನಲ್ಲಿ ಹೂತಿದ್ದ ಹೆಜ್ಜೆಗಳ ಗುರುತುಗಳೂ ನೀಳವಾಗಿ ಹಾದಿಯಲ್ಲಿ ಕಾಣಬರುತ್ತಿದ್ದುವು, ಆ ಜಾಡನ್ನು ಹಿಡಿದೇ ಅರಸು ಅವುಗಳನ್ನು ಹಿಂಬಾಲಿಸಿದನು, ಕೂಡಲೆ ಕುದರೆಯ ಬೆನ್ನಿನಮೇಲ ಕುಳಿತಿದ್ದವನು ಮೇಲ್ಮೆಯ್ಯನ್ನೊಂದುಕಡೆಗೆತುಸ ಬಾಗಿಸಿ, ಅಂಬನ್ನು ಎಸೆಯುತಲಿದ್ದನು, ವರಾಹಗಳು - ತಮ್ಮ ಮೈಮೇಲಿನ ಮುಳ್ಳುಗಳನ್ನು ನೆಟ್ಟಗೆ ನಿಲ್ಲಿಸಿ, ಅರಸನನ್ನು ಇದಿರಿಸಿ, ನುಗ್ಗಿ, ಇರಿಯಲೆಳಸಿದುವು, ಆದರೆ - ಅಷ್ಟರಲ್ಲಿಯೇ ತಮ್ಮ ಹಿಂಗಡೆಗೆ ಆಸರೆಯಾಗಿದ್ದ ಮರದ ಬುಡದಕಡೆಯಿಂದ ಬಾಣಗಳ ಪೆಟ್ಟನ್ನು ತಿಂದ ತಮ್ಮನ್ನು ಅರಿಯಲೇ ಇಲ್ಲ.

ತರುವಾಯ ಬೇರೊಂದೆಡೆಯಲ್ಲಿ - ಭೂರಮಣನು - ಕಾಡುಕೋಣನ ಕಣ್ಣನ್ನು ಲಕ್ಷ್ಯವಿಟ್ಟು ಕೋಲನ್ನೆಸೆದನು, ಆ ಪತ್ರಿಯು-ಬಹು ವೇಗದಿಂದೊಳದೂರಿ, ಮಹಿಷದ ಮೆಯ್ಯನ್ನು ಭೇದಿಸಿಕೊಂಡು, ಹೊರಗೆ

ಬಂದು, ತನ್ನ ಗರಿಗೆ ರಕ್ತದ ಲೇಪವಿಲ್ಲದೆ, ಮೊದಲಾಸ್ಯೆರಿಭವನ್ನು ಕೆಳ ಗುರುಳಿಸಿ, ಆಮೇಲೆ ತಾನೂ ಬಿದ್ದಿತು.

ಇನ್ನೊಂದುಕಡೆ - ನೃಪತಿಯು - ತೀಕ್ಷ್ಣವಾದ ಕ್ಷುರಪ್ರಗಳೆಂಬ ಬಾಣಗಳನ್ನು ಬಿಟ್ಟು, ಖಡ್ಗಮೃಗಗಳ ಕೋಡುಗಳನ್ನು ಕೆಳಗಿಳುಹಿ, ಅವುಗಳ ಶಿರಗಳನ್ನು ಹಗುರಗಳಾಗುವಂತೆಸಗಿದನು, ಆದರೆ-ವಿನಯದಲ್ಲಿ ನೆಲೆಗೊಂಡಿರುವ ಅರಸು - ಹೆಮ್ಮೆಯಿಂದ ಕೊಬ್ಬಿ, ಹೆಚ್ಚಿ ಮೆರೆಯುವವ ರನ್ನು ತಗ್ಗಿಸಬೇಕೆಂಬ ಬಯಕೆಯುಳ್ಳವನಲ್ಲದೆ, ತಲೆಯನ್ನೇ ಒಡೆದು, ಉಳಿಸಲೇಬಾರದೆಂದೆಣಿಸುವವನೇ ಅಲ್ಲ.

ಅಲ್ಲಿಂದ ಮುಂದೆ ಹೊರಡುತ್ತಿರುವಲ್ಲಿ - ಗವಿಗಳೊಳಗೆ ಪವಳಿಸಿದ್ದ ಹುಲಿಗಳು - ರೋಷಗೊಂಡು, ಗಾಳಿಯಿಂದರಳಿ ಬಾಗಿದ ಸರ್ಜಕ ತರು ಗಳ ಕೊನೆಗಳಂತೆಸೆವ ಶಿರಗಳನ್ನುಳ್ಳುವಾಗಿ, ಮೇಲೆಬೀಳಲು ಬಹು ವೇಗದಿಂದ ಇದಿರಿಗೆ ಹಾರಿಬಂದುವು, ದೊರೆಯು - ನಿರ್ಭಯನಾಗಿ, ಚೆನ್ನಾಗಿ ಪಳಗಿದ ಕೈಚಳಕವುಳ್ಳವನಾದುದರಿಂದ ನಿಮಿಷಮಾತ್ರದಲ್ಲಿ ಅವುಗಳ ಬಾಯ್ಗಳ ಬಿಲಗಳನ್ನು, ಅಂಬುಗಳಿಂದ ತುಂಬಿ, ಬತ್ತಳಿಕೆಗಳ ನ್ನಾಗಿ ಮಾಡಿದನು.

ಆ ಬಳಿಕ ಅವನಿಪಾಲನು - ಮರಗಿಡ ಬಳ್ಳಿಗಳ ಪೊದೆಗಳೊಳಗೆ ಹುಡುಕಿ, ಅಡಗಿರುವ ಸಿಂಹಗಳನ್ನು ಕೊಲ್ಲಲೆಳಸಿ, ಅಕಾಲದಲ್ಲಿ ಆಕಾ ಶದೊಳಗೆ ಹುಟ್ಟುವ ಉತ್ಪಾತ ಶಬ್ದದಂತಿರುವ ಮೌರ್ವೀಘೋಷಗಳಿಂದ ಕ್ಷೋಭೆಪಡಿಸಿದನು. ಶೌರ್ಯದಿಂದ ಮೇಲೆನಿಸಿ, ಮೃಗಗಳ ಸಂಬಂಧ ದಿಂದ ಅವುಗಳಿಗುಂಟಾಗಿರುವ ರಾಜಾ ಎಂಬ ಶಬ್ದವನ್ನು ಹೊಟ್ಟೆಕಿಚ್ಚಿ ನಿಂದ ತಾಳಲಾರದಿದ್ದುದೇ ಅದಕ್ಕೆ ಮೂಲ. ಹುಟ್ಟಿದಂದಿನಿಂದಲೂ ಆನೆಗಳಲ್ಲಿ ತೀವ್ರವಾದ ವೈರವನ್ನು ಬೆಳಸುತ್ತಾ, ಉಗುರುಗಳ ಸಂದುಗ ಳೊಳಗೆ ಮುತ್ತುಗಳನ್ನೊಳಗೊಂಡಿರುವ ಆ ಕೇಸರಿಗಳನ್ನು ಕೊಂದು, ರಣಾಂಗಣಗಳಲ್ಲಿ ತನಗೆ ಸಹಾಯಮಾಡಿದ್ದ ಗಜಗಳ ಋಣದಿಂದ ಬಿಡುಗ ಡೆಯನ್ನು ಹೊಂದಿದವನನ್ನಾಗಿ ತನ್ನನ್ನು ತಿಳಿದುಕೊಂಡನು.

ಒಂದು ಸ್ಥಲದಲ್ಲಿ - ಚಮರ ಮೃಗಗಳನ್ನು ಕಂಡ ಪಾರ್ಥಿವನು - ಅಶ್ವಾರೂಢನಾಗಿಯೇ ಅವುಗಳನ್ನು ಬಳಸಿ, ಬಹು ಕ್ರೂರವಾದ

ಬಾಣಗಳನ್ನು ಪ್ರಯೋಗಿಸಿ, ಪರರಾಜರನ್ನು ಹೇಗೋಹಾಗೆ, ಅವುಗಳನ್ನೂ ಶುಭ್ರಚಾಮರ ಶೂನ್ಯವಾದವುಗಳನ್ನಾಗಿ ಮಾಡಿ, ತತ್ಕಾಲದಲ್ಲಿ ಶಾಂತನಾದನು. ಶೂರರು - ಪರರಾಯರ ಹೆಮ್ಮೆಯನ್ನು ಅಡಗಿಸುವರಲ್ಲದೆ ಪ್ರಾಣಹರಣ ಮಾಡಲೆಳಸುವುದಿಲ್ಲ.

ಆಮೇಲೆ - ನರನಾಥನು - ತನ್ನ ಹತ್ತಿರದಲ್ಲಿಯೇ ಹಾರಿಹೋಗುತಲಿದ್ದ ಚಿತ್ರಶಿಖೆಯುಳ್ಳ ನವಿಲನ್ನು ಕಂಡರೂ, ಅದನ್ನು ಗುರಿಕಟ್ಟಿ ಹೊಡೆಯಲಿಲ್ಲ. ಏಕೆಂದರೆ - ತನ್ನ ಪ್ರಿಯಪತ್ನಿಯರೊಡನೆ ವನವಿಹಾರದಲ್ಲಿರುವಾಗ, ಬಳಲಿದ ಆ ತರುಣಿಯರ ಶಿರಗಳಲ್ಲಿ ಚಿತ್ರಮಾಲಾಲಂಕೃತವಾಗಿದ್ದು ಸಡಲಿದ ತಲೆದುರುಬುಗಳು, ಹೋಲಿಕೆಯಿಂದ ಸ್ಮರಣೆಗೆ ಬಂದು, ಮನವಲ್ಲಿಗೆ ತೆರಳಿದುದೇ ಕಾರಣವಾಗಿದ್ದಿತು.

ಅದುವರೆಗೆ ಬಹುದೂರದ ದಾರಿಯನ್ನು ಸುತ್ತಿದ್ದಾಯಿತು. ಬಳಲಿಕೆಯು ಹೇರಳವಾಯಿತು. ಬೆವರಿನ ಹನಿಗಳು ಮುಖದಲ್ಲಿ ತುಂಬಿದ್ದುವು, ಹೊಳೆಗಳಮೇಲೆ ಹರಿದು, ತುಂತುರುಗಳನ್ನಾಂತು, ಮರಗಳ ಸಂದುಗಳೊಳಗೆ ನುಗ್ಗಿ, ತಳಿರುಗಳನ್ನಲುಗಿಸಿ, ಬರುತಲಿರುವ ವನಮಾರುತವು - ಆ ಅವನಿಪಾಲನ ಶ್ರಮವನ್ನೆಲ್ಲ ಪರಿಹರಿಸುತಲಿದ್ದಿತು. ಇಂತು ಬೇಟೆಯಾಟವನ್ನು ಎಡಬಿಡದೆ ಪ್ರೊಡವಿಯಾಣ್ಮನು ಅನುಸರಿಸುತಲೇ ಬಂದನು, ತನ್ನ ಕರ್ತವ್ಯವನ್ನೆಲ್ಲ ಮರೆತನು, ಆಳ್ವಿಕೆಯ ಹೊರೆಯನ್ನೆಲ್ಲ ಮಂತ್ರಿಗಳಿಗೊಪ್ಪಿಸಿ, ಅತ್ಯಾಸಕ್ತಿಯಿಂದ ತಣಿಯದಿರುವ ದೊರೆಯನ್ನು ಮೃಗಯೆಯು ಕಾಮಿನಿಯಂತೆ ಸೆಳೆಯಿತು.

ಕಂದ ॥ ಕಾಮವು ದನುಭವದಿಂದಂ ।
ನೇಮದೆ ತಾಂ ಶಾಂತಿ ಯ್ದುದ ದೆಂದುಂ ಬಗೆಯಲ್ ॥
ಹೋಮದೆ ವೈಶ್ವಾನರನುಂ ।
ಕಾಮಂ ಪೆರ್ಚದಯೆ ಶಾಂತ ಮಪ್ಪುದೆ ಜಗದೊಳ್ ॥

ಆಖೇಟದಾಶೆಯಿಂದ ಹಾಗೆಯೇ ನರದೇವನು ಮುಂದರಿದನು. ಸಂಜೆಯಾಯಿತು, ಪರಿಜನರೆಲ್ಲ ಹಿಂದುಳಿದರು, ಸುಕುಮಾರವಾದ ಕುಸುಮ ಕಿಸಲಯಗಳಿಂದ ಒಂದೆಡೆ ತಲ್ಪವನ್ನು ಕಲ್ಪಿಸಿದನು, ಅದರ ಮೇಲೆಯೇ ಪವಳಿಸಿದನು, ಜ್ಯೋತಿರ್ಲತೆಗಳೇ ಅಂದಿನ ಇರುಳು

ದೀವಿಗೆಗಳಾದುವು. ತ್ರಿಯಾಮೆಯನ್ನೂ ಕಳೆದನು. ಬೆಳಗಾಗುತ ಬಂದಿತು, ತಬಟೆಯ ಶಬ್ದದಾತಿರುವ ಆನೆಯ ಹಿಂಡಿನ ಅಗಲವಾದ ಕಿವಿಗಳೆಂಬ ತಾಳಗಳ ಸದ್ದನ್ನು ಕೇಳಿ ಎಚ್ಚತ್ತನು. ಹಕ್ಕಿಗಳ ಕೂಗೆಂಬ ಕಿವಿಗಿಂಪಾದ ವಂದಿಮಂಗಳಗೀತವನ್ನೂ ಆಲಿಸುತ್ತಾ ಆನಂದಿಸಿದನು.

ಬಳಿಕ - ಮರಳಿ ಬೇಟೆಗಾಗಿ ಹೊರಟನು, ಅಲ್ಲಲ್ಲಿ ಸುತ್ತುತ್ತ, ಒಂದುವೇಳೆ-ರುರುಮೃಗವನ್ನು ಕಂಡು ಅದನ್ನು ಹಿಂಬಾಲಿಸಿ ನಡೆದನು. ಕಾಡಿನಲ್ಲಿ ಕುದುರೆಯ ವೇಗದಿಂದ ಹಿಂದುಳಿದ ಪರಿವಾರಕ್ಕೆ ಕಾಣದೆ ಹೋದನು. ಅಲೆದ ಶ್ರಮದಿಂದ ಅಶ್ವದ ಮೆಯ್ಯೆಲ್ಲ ಬೆವರಿತು, ಬಾಯೊಳಗೆ ನೊರೆಯೂ ಹೊರಟದ್ದಿತು ಹಾಗೆಯೇ ನಡೆದು, ತಪಸ್ವಿಗಳಿಂದ ತುಂಬಿರುವ ತಮಸಾನದಿಯ ತಡಿಗೈತಂದನು. ಹಳ್ಳದಲ್ಲಿ ಹರಿಯುತಲಿದ್ದ ಆ ಹೊಳೆಯೊಳಗೆ, ಕೊರಳು ಸಣ್ಣಗಿರುವ ಕುಂಭದಿಂದ ನೀರನ್ನು ತುಂಬುತಲಿರುವಾಗ ಉಂಟಾದ ಬುಡಬುಡವೆಂಬ ಗಂಭೀರವಾದ ಶಬ್ದವೊಂದು ದೊರೆಗೆ ಕೇಳಬಂದಿತು. ಅದನ್ನು ಆನೆಯ ಬೃಂಹಿತ ಶಬ್ದವೆಂದು ನೆನೆದನು. ಆ ಧ್ವನಿಯನ್ನು ಅನುಸರಿಸಿ ಹೋಗಿ, ಲಕ್ಷ್ಯವನ್ನು ಭೇದಿಸುವ ಬಾಣವನ್ನು ಹೊಡೆದನು. "ವಿನಾಶಕಾಲಕ್ಕೆ ವಿಪರೀತ ಬುದ್ಧಿ" ಎಂಬ ನಾಣ್ಣುಡಿಯು ಸಟೆಯಲ್ಲ. "ವಿಳಿಗೆಯನ್ನು ಬಯಸುವ ಅರಸು ಕಾಳಗವನ್ನು ಬಿಟ್ಟು, ಉಳಿದ ಸಮಯದಲ್ಲಿ ಆನೆಯನ್ನು ಕೊಲ್ಲಬಾರದು" ಎಂಬ ಶಾಸ್ತ್ರವನ್ನು ಬಲ್ಲವನೇ ಹೌದು, ಆದರೇನು ? ಆ ಸಮಯದಲ್ಲಿ ಮರವೆಯುಂಟಾಯಿತು. ಪಙ್ತ್ತರಥನು - ಸುಪಥವನ್ನು ದಾಟಿದನು, ಅಪಥದಲ್ಲಿ ಅಡಿಯನ್ನಿಟ್ಟನು, ಮಾಡಬಾರದುದನ್ನು ಮಾಡಿದನು, ಆಗಬಾರದುದೇ ಆಗಬೇಕೆಂಬುದು ಭವಿತವ್ಯತೆಯಾಗಿದ್ದಿತು. ಶಾಸ್ತ್ರಜ್ಞರಾದರೂ ರಜೋಗುಣಕ್ಕೊಳಗಾದರೆ ಕಣ್ಣುಕಾಣದೆ ದುರ್ಮಾರ್ಗಗಾಮಿಗಳಾಗುತ್ತಾರಲ್ಲವೆ ? ಆ ಕೂಡಲೇ, ಹಾ ! ತಾತಾ !! ಎಂಬ ಗೋಳು ಕೇಳಬಂದಿತು. ಅರಸು ಅಡಗಿದನು, ಬಹು ಖಿನ್ನನಾದನು, ಜಂಡುಹುಲ್ಲಿನ ಪೊದೆಯಲ್ಲಿ, ಶಬ್ದವು ಹುಟ್ಟಿದ ಸ್ಥಲವನ್ನು ಹುಡುಕಿದನು. ಎದೆಯಲ್ಲಿ ಅಲಗುನಟ್ಟು, ಕೈಯ್ಯಲ್ಲಿ ಕುಂಭವನ್ನು ಹಿಡಿದು, ಬಿದ್ದಿರುವ ಮುನಿಕುಮಾರನನ್ನು ಕಂಡನು. ತತ್‌ಕ್ಷಣದಲ್ಲಿಯೇ ತನ್ನ ಹೃದಯದಲ್ಲಿ

ನಟ್ಟ ಶಲ್ಯವುಳ್ಳವನಾಗಿ ಸಂತಪಿಸಿದನು. ತಟ್ಟನೆ ಕುದುರೆಯಿಂದಿಳಿದನು. ಹತ್ತಿರಕ್ಕೆ ಓಡಿಬಂದನು, ತಾನು ಪಾಪಕ್ಕೆ ಹೆದರತಕ್ಕವನೆಂಬುದನ್ನು ತಿಳಿಸಲಿಕ್ಕೆ ಪ್ರಖ್ಯಾತವಾದ ತನ್ನ ಪ್ರವರವನ್ನು ತಿಳಿಸಿದನು. ತನಗೆಲ್ಲಿ ಬ್ರಹ್ಮಹತ್ಯಾದೋಷವು ಬಂದೊದಗುವುದೋ ಎಂದು ಮಹಾಭಯದಿಂದ ಗಡಗಡನೆ ನಡುಗುತ್ತಾ, ಕುಟುಕು ಜೀವದಿಂದ ಕುಂಭದಮೇಲೆ ಬಿದ್ದಿರುವಾತನ ವಂಶಕ್ರಮವನ್ನು ಕೇಳಿದನು. ನಾನು ಬ್ರಾಹ್ಮಣೇತರ ತಾಪಸಕುಮಾರನು ಎಂಬದಾಗಿ ತೊದಲಿತೊದಲಿ, ಬಂದೊಂದೇ ಅಕ್ಷರವನ್ನಾಗಿ ಹೇಳಿದ ಆ ತಪಸ್ವಿಪುತ್ರನ ನುಡಿಯನ್ನಾಲಿಸಿದನು.

ಆ ಮುನಿತನಯನು—“ ನನ್ನ ತಾಯಿತಂದೆಗಳಿಬ್ಬರೂ ಹುಟ್ಟು ಕುರುಡರು, ಮುಪ್ಪಿನ ಮುದುಕರು, ಅವರಿಗೆ ನಾನುಹೊರತು ಬೇರೆ ಗತಿಯಿಲ್ಲ. ಬಹು ದಾಹಗೊಂಡಿದಾರೆ, ಮೊದಲು ನನ್ನನ್ನು ಅವರ ಬಳಿಗೆ ಕರೆದೊಯ್ಯಿ ” ಎಂದು ಹೇಳುತ್ತಲೇ ಸುಮ್ಮನಾದನು. ಆಗಲೇ ದಶರಥನ ಜೀವವು ಹಾರಿಹೋದಂತಾಯಿತು, ಆ ಬಾಲಕನ ಎದೆಯೊಳಗೆ ಸಿಲುಕಿರುವ ಶಲ್ಯವನ್ನುಕಿತ್ತರೆ ರಕ್ತಪ್ರವಾಹವು ಹರಿದು, ಉಸಿರು ಹಾರಿ ಹೋಗುವುದು, ನೋಡೋಣ, ಮಾತಾಪಿತೃಗಳ ಸಮೀಪಕ್ಕೆ ಕೊಂಡೊಯ್ಯುವ, ಅದುವರೆಗೂ ಪ್ರಾಣವಾಯುವು ಇರುವುದೋ ಹೇಗೋ ಎಂದುಕೊಂಡು, ನಡುಗುತಲಿರುವ ಕರತಲದಿಂದ ಆ ಹುಡುಗನನ್ನು ಎತ್ತಿಕೊಂಡು, ವೃದ್ಧದಂಪತಿಗಳ ಸನಿಹಕ್ಕೆ ಕುಂಭಜಲದೊಡನೆ ಬೇಗನೆ ಬಂದನು. ಅಲ್ಲಿ ಆ ಕುವರನನ್ನು ಮೆಲ್ಲಗೆ ಇಳುಹಿದನು, ಆಗಲಾ ಕುರುಡು ಮುದುಕರ ಶೋಕವನ್ನು ಹೇಳಬೇಕೆ? ಜನನೀಜನಕರಿಬ್ಬರೂ ಗೊಳೋ ಎಂದು ಅಳುತ್ತಾ, ಅಯ್ಯೋ! “ ಎದೆಯೊಳಗೆ ಹೂತಿರುವ ಈ ಮೊಳೆಯನ್ನು ತೆಗೆಯಪ್ಪಾ! ” ಎಂದು ಮಗನ ಮೆಯ್ಯನ್ನು ಕೈಗಳಿಂದ ತಡಹುತ್ತಾ ಹೇಳಿದರು. ಹೊಟ್ಟೆಯೊಳಗೆ ತುಂಬಿದ ದುಃಖಭಯಗಳ ಭಾರದಿಂದ ಬೆಪ್ಪಾದ ದೊರೆಯು - ಕೀಲನ್ನು ಮೆತ್ತಗೆ ಎತ್ತುತಲಿರುವಾಗಲೇ ಆ ಕುಮಾರನು ಪರಾಸುವಾದನು, ಆ ಮುನಿವೃದ್ಧನು - ಉಕ್ಕಳಿಸುವ ಶೋಕದಿಂದ ಬೊಗಸೆಯಲ್ಲಿ ತುಂಬಿದ ಕಣ್ಣೀರುಳ್ಳವನಾಗುತ್ತಾ “ ಎಲೈ ದೊರೆಯೇ! ನೀನೂ - ಮುಪ್ಪಿನಲ್ಲಿ ಮಗನ

ಮುಖವನ್ನು ಕಾಣದೆಯೇ ನನ್ನಂತೆ ಮರಣವನ್ನು ಪಡೆಯುವೆ ,, ಎಂದು ಶಪಿಸಿದನು. ಮೊದಲು ಕಾಲಿನಿಂದ ತುಳಿಯಲು, ತರುವಾಯ ರೋಷಗೊಂಡು, ವಿಷವನ್ನು ಕಾರುವ ಸರ್ಪದಂತಿರುವ ಆ ವೃದ್ಧಮುನಿಯನ್ನು ಕುರಿತು ಮೊದಲು ತಪ್ಪನ್ನು ಮಾಡಿರುವ ಕೋಸಲಪತಿಯು —

ಎಲೈ ಭಗವಂತನೇ ! ಮಗನ ಮೊಗದಾವರೆಯನ್ನೇ ಕಾಣದಿರುವ ನನ್ನಲ್ಲಿ ನೀನು ಸಿಡಿಲಿನಂತೆ ಕೆಡಹಿದ ‹‹ ಪುತ್ರಶೋಕದಿಂದ ಸಾಯುವೆ ,, ಎಂಬ ಈ ಬಿರುನುಡಿಯೂ, ಅನುಗ್ರಹವಾಗಿ ಪರಿಣಮಿಸಿ ಇದೆ. ಕಟ್ಟಿಗೆಗಳಿಂದ ಉರಿಯುತಲಿರುವ ಬೆಂಕಿಯೂ - ಬೇಸಾಯಕ್ಕೆ ತಕ್ಕುದೆನಿಸಿಸಿರುವ ನೆಲವನ್ನು ಸುಡುತ್ತಾ, ಆ ಭೂಮಿಗೆ ಬೀಜವು ಸುಖವಾಗಿ ಮೊಳೆಯತಕ್ಕ ಶಕ್ತಿಯನ್ನು ಉಂಟುಮಾಡುತದೆಯಲ್ಲವೆ ? ಎಂದನು.

ಇಂತು ಅನರ್ಥವು ಬಂದೊದಗಲು, ಮುನಿಯು- ಜನಾಧಿಪನ ವಿಷಯದಲ್ಲಿ ಕರುಣೆಯಿಲ್ಲದವನಾದನು, ಇಂತಪ್ಪ ಪಾಪಕಾರ್ಯವನು ಮಾಡಿ, ವಧಾರ್ಹನೆನಿಸಿದ ಈ ದುರಾತ್ಮನು ಮುಂದೇನಮಾಡಬೇಕೆಂಬುದನ್ನು ಅಪ್ಪಣೆಕೊಡಿಸಬೇಕೆಂದು ವಸುಧಾಧಿಪನು ಆ ವೃದ್ಧ ತಪಸ್ವಿಯನ್ನು ವಿನಯದಿಂದ ಪ್ರಾರ್ಥಿಸಿದನು. ಬಳಿಕಲಾ ಮುನಿಯು - ಸುತಶೋಕವನ್ನು ಸಹಿಸಲಾರದೆ, ಪತ್ನೀಸಹಿತನಾಗಿ, ಪರಾಸುವಾದ ಪುತ್ರನನ್ನು ಅನುಸರಿಸಬೇಕೆಂದು ನೆನೆದು, ಕಾಷ್ಠಸಮೃದ್ಧಿಯಿಂದ ಪ್ರಜ್ವಲಿಸುವ ಅಗ್ನಿಯನ್ನು ಮಾತ್ರ ಬೇಡಿದನು.

ಈಪ್ರಕಾರವಾಗಿ ಸಂಭಾಷಿಸುತಲಿರುವ ಸಮಯಕ್ಕೆ ಪರಿಜನರೆಲ್ಲರೂ ಬಂದು ಸೇರಿದರು, ಅರಸೂ-ಮುನಿಯ ಅಪ್ಪಣೆಯಂತೆ ಅನುಚರರಿಂದ ಚಿತೆಯನ್ನು ಅಣಿಮಾಡಿಸಿ, ಅಲ್ಲಿಂದ ಮುಂದೆ ನಡೆಸಬೇಕಾವ ಕೆಲಸವನ್ನೆಲ್ಲ ನೆರವೇರಿಸಿ, ಮುನಿತನಯನನ್ನು ಕೊಂದುದರಿಂದ ಬಂದ ಪಾತಕವು ಧೈರ್ಯವನ್ನುತೊಲಗಿಸಲು, ಬಡಬಾಗ್ನಿಯನ್ನೊಳಗೊಂಡಿರುವ ಕಡಲಿನಂತೆ, ಆತ್ಮನಾಶಕ್ಕೆ ಕಾರಣವಾಗಿ, ಅಂತರಂಗದಲ್ಲಿ ಕುದಿಯುತಲಿರುವ ಮುನಿಶಾಪವನ್ನು ಧರಿಸಿ, ಅಲ್ಲಿಂದ ಹೊರಟು, ಪರಿಜನದಿಂದೊಡಗೂಡಿ ಪುರವನ್ನು ಸೇರಿದನು.

— ಇಂತು ಮೃಗಯಾವರ್ಣನವೆಂಬ ಒಂಭತ್ತನೆಯ ಅಧ್ಯಾಯಂ —

ಶ್ರೀಃ

ಶ್ರೀ ಶಾರದಾಮ್ಬಾಯೈನಮಃ.

## ಹತ್ತನೆಯ ಅಧ್ಯಾಯಂ.

**ಸೂಚನೆ ॥ ಸಂತತಿ ಗಾಗಿಯೆ ಚಿಂತಿಪ ।**
**ನಂತೇಶಂ ಪುತ್ರಕಾಮ ನಿಷ್ಟಿಯ ಗೈದಂ ॥**
**ಸಂತಸ ಗೊಳಿಸಲ್ ಸುರರಂ ।**
**ಕಂತುಪಿತಂ ಪಙ್ಕ್ತಿರಥನಿ ನುದಿಸಿದ ನಿಳೆಯೊಳ್ ॥**

ಅಮರೇಂದ್ರನ ತೇಜಮಂ ಪಡೆದು, ಎಣೆಯಿಲ್ಲದ ಏಳಿಗೆಯಿಂದಿರುತ್ತಾ, ಪೊಡವಿಯನ್ನು ಪಾಲಿಸುತಲಿದ್ದ ಅಜನನ್ದನನಿಗೆ, ಮುನಿಶಾಪವು ಬಂದಮೇಲೆ, ಸ್ವಲ್ಪಕಡಮೆ ಹತ್ತುಸಾವಿರ ವರ್ಷಗಳು ಕಳೆದುವು. ಆದರೂ - ಆ ದಶರಥನು - ತನ್ನ ಪಿತೃಗಳ ಋಣದಿಂದ ಬಿಡುಗಡೆಯನ್ನು ಹೊಂದಲಿಕ್ಕೆ ಕಾರಣವಾಗಿ, ತತ್ಕಾಲದಲ್ಲಿ ಶೋಕವೆಂಬ ಅಂಧಕಾರವನ್ನು ತೊಲಗಿಸಲು ತಕ್ಕುದೆನಿಸಿರುವ, ಪುತ್ರನೆಂಬ ಪೆಸರಂ ಪಡೆದ ದೀವಿಗೆಯನ್ನು ಪಡೆಯಲೇ ಇಲ್ಲ. ಆಮೇಲೆಯೂ, ಕಾರಣವನ್ನು ನಿರೀಕ್ಷಿಸುತಲಿದ್ದ ಆ ಅರಸು - ಮಥನಕ್ಕಿಂತಲೂ ಮೊದಲು ಕಾಣಬರದಿರುವ ರತುನಗಳನ್ನೊಳಗೊಂಡಿದ್ದ ಕಡಲಿನಂತೆ ಬಹುಕಾಲವನ್ನು ಕಳೆದನು. ಜಿತೇಂದ್ರಿಯರೆನಿಸಿದ ಋಶ್ಯಶೃಂಗನೇ ಮೊದಲಾದ ಯಾಜ್ಞಿಕರು - ಪುತ್ರಾರ್ಥಿಯಾದ ಆ ದಶರಥನಿಗೆ ಪುತ್ರನಿಮಿತ್ತವಾಗಿರುವ ಯಾಗವನ್ನು ಪ್ರಾರಂಭಿಸಿದರು. ಆ ಸಮಯದಲ್ಲಿ ದೇವತೆಗಳು - ಪುಲಸ್ತ್ಯ ಕುಲದೊಳುದಿಸಿದ ರಾವಣನ ಹಾವಳಿಯನ್ನು ತಾಳಲಾರದೆ ತೊಂದರೆಪಟ್ಟು, ಬೇಸಗೆಯನ್ನು ಸಹಿಸಲಾರದೆ ನೊಂದ ದಾರಿಗರು ನೆಳಲಿನ ಮರವನ್ನು

ಅರಸುವಹಾಗೆ, ಹರಿಯನ್ನುಶರಣನ್ನಾಗಿ ಬಯಸಿ, ಆತನಬಳಗೆತೆರಳದರು. ಆ ಅವುರರ್ಕಳೂ ಕಡಲತಡಿಗೈದುವಲ್ಲಿಗೆ ಸರಿಯಾಗಿ, ಪವಳಸಿದ್ದ ಪುರಾಣ ಪುರುಷನೂ ಎಚ್ಚತ್ತನು, ಯಾಚಕರು ಗುರಿಯಿಟ್ಟು ಹೋದ ಯಜ ಮಾನನು - ಬೇರೊಂದು ಕೆಲಸಕ್ಕೆ ತೊಡಗದಿರುವುದು, ಕಾರ್ಯಸಿದ್ಧಿಯಾ ಗಲು ಪ್ರಥವು ಶುಭಲಕ್ಷಣವಲ್ಲವೆ ? ದಿವಾಕ .ರು - ಶೇಷನ ಶರೀರವೆಂಬ ಸಿಂಹಾಸನದಮೇಲೆ ಮಂಡಿಸಿರುವ ಸರಸಿಜಾಕ್ಷನನ್ನು ಕಂಡರು, ಆಗ ಲಾವಿಷ್ಣುವಿನ ದೇಹವು - ಆದಿಶೇಷನ ಹೆಡೆಯ ರತುನಗಳಂದ ಹೊರ ಹೊರಟು ಬೀರುತಲಿರುವ ಬೆಳಕಿನಿಂದ ಬೆಳಗುತಲಿದ್ದಿತು, ಸಿರಿಯು - ಅರಳದ ತಾವರೆಯಲ್ಲಿ ಪದ್ಮಾಸನದಿಂದ ಕುಳಿತು, ತೊಡೆಯ ದುಕೂಲದ ಮೇಲೆ ಮೇಖಲೆಗೆ ಅಡಿಗಳು ತಾಗದಹಾಗೆ ತನ್ನೆರಡು ಕರತಲಗಳನ್ನೂ ನೀಡಿದ್ದಳು, ಅಲ್ಲಿ ಹರಿಯು ತನ್ನ ಚರಣಗಳನ್ನು ಅರ್ಪಿಸಿದ್ದನು, ಮತ್ತು- ಅರಳದ ಬೆಳ್ದಾವರೆಯಂತೆ ಬೆಳಗುವ ಕಣ್ಣುಗಳನ್ನೊಳಗೊಂಡು,ಎಳಬಿಸಿ ಲಿನಂತೆಸೆವ ಬಟ್ಟೆಯನ್ನುಟ್ಟು ಇದ್ದುದರಿಂದ, ಪ್ರಾರಂಭದಲ್ಲಿ ನೋಡ ಲಿಕ್ಕೆ ಹಿತವಾಗಿರುವ ಶರತ್ಕಾಲದ ದಿವಸದ ಬೆಳಗಿನಂತೆ ಕಂಗೊಳಸುತಲಿ ದ್ದನು. ತಳತಳನೆ ಹೊಳೆಯುತಲಿರುವ ಪ್ರಭೆಯಿಂದ ತುಂಬಿದ ಶ್ರೀವ ತ್ಸವೆಂಬ ಮಚ್ಚೆಯನ್ನುಳ್ಳವನಾಗಿ, ಲಕುಮಿಯು - ತನ್ನ ಬೆಡಗನ್ನು ನೋಡಿಕೊಳ್ಳಲು ಅಣಿಯಾದ ಕನ್ನಡಿಯುಂತಿರುವ ಸಾಗರ ಜಲಸಾರವಾದ ಕೌಸ್ತುಭವೆಂಬ ದಿವ್ಯರತ್ನವನ್ನೂ, ಅಗಲವಾದ ಎದೆಯಲ್ಲಿ ಅಳವಟ್ಟಿದ್ದನು ಶಾಖೆಗಳಂತಿರುವ ತೋಳುಗಳಂದ, ಬೆಲೆಯಿಲ್ಲದ ಬಗೆಬಗೆಯ ಉಡಿಗೆ ತೊಡಿಗೆಗಳ ಅಲಂಕಾರವನ್ನು ಪಡೆದು, ಜಲನಿಧಿಯ ನಡುವೆ ಮೊಳೆತ ಪಾರಿಜಾತ ವೃಕ್ಷದಂತೆ ಕಾಣಬರುತ್ತಿದ್ದನು. ಅಸುರಾಂಗನೆಯರ ಕಪೋ ಲಗಳಲ್ಲಿನ ಮದರೇಖೆಗಳನ್ನು ಅಳಸಬಲ್ಲ ಸುದರ್ಶನವೇ ಮೊದಲಾದ ಆಯುಧಗಳ ಅಭಿಮಾನಿ ದೇವತೆಗಳೂ - ಶರೀರವನ್ನಾಂತು ಸನ್ನಿಧಿಯಲ್ಲಿ ಜಯಘೋಷವನ್ನು ಉದಹರಿಸುತ್ತಿದ್ದ ಸೇವೆಯನ್ನು ಸ್ವೀಕರಿಸುತಲಿ ದ್ದನು. ಮತ್ತು-ಸನ್ನಿಧಾನ ವಿಶೇಷದಿಂದ ಶೇಷನೊಡನೆ ವಿರೋಧವನ್ನು ತೊರೆದು, ಮಾಗಿರುವ ವಜ್ರಾಯುಧದ ಗಾಯಗಳನ್ನೊಳಗೊಂಡಿರುವ

ದೇಹದಿಂದೊಡಗೂಡಿ * ವಿಶೇಷವಾಗಿ ತಗ್ಗಿ, ಸಮೀಪದಲ್ಲಿ ಅಂಜಲಿ ಬದ್ಧನಾಗಿ ನಿಂತಿರುವ ಗರುತ್ಮಂತನ ಸೇವೆಯನ್ನು ಕೈಗೊಳ್ಳುತಲಿದ್ದನು. ಹಾಗೆ ಎಚ್ಚರಗೊಂಡ ಭಗವಂತನನ್ನು ಕುರಿತು, ಎಲೈ ಜಗನ್ನಾಥನೆ ! ಸುಖಶಯನವು ಮುಗಿದುದೆ ? ಎಂದು ಭೃಗುಮೊದಲಾದ ಮಹರ್ಷಿಗಳು ಕುಶಲಪ್ರಶ್ನೆಯನ್ನು ಮಾಡುತಲಿದ್ದರು. ಆಗತಾನೆ ಯೋಗನಿದ್ರೆಯಿಂದೆ ಚ್ಚತ್ತಿದ್ದ ಪದ್ಮನಾಭನು - ನಿದ್ರಾವಸಾನದಿಂದ ನಿರ್ಮಲವಾಗಿರುವ ಪಾವನವಾದ ಕಟಾಕ್ಷಗಳನ್ನು ಅವರಮೇಲೆ ಹರಡುತ ಅನುಗ್ರಹಿಸುತಲಿದ್ದನು.

ಆಗ - ಅಸುರರನ್ನಡಗಿಸುವ ಹರಿಗೆ ಸುರರೆಲ್ಲರೂ ಉದ್ದವಾಗಿ ಬಾಗಿ ಭಕ್ತಿಯಿಂದ ಅಡ್ಡಬಿದ್ದರು. ಬಳಿಕ ವಾಕ್ಕಿಗೂ ಮನಸ್ಸಿಗೂ ಅಗೋಚರನಾಗಿ, ಸ್ತೋತ್ರಾರ್ಹನೆನಿಸಿರುವ ಸರ್ವೇಶ್ವರನನ್ನು ಸ್ತುತಿಸ ತೊಡಗಿದರು.

ಮೊಟ್ಟಮೊದಲು ಜಗತ್ತನ್ನು ಸೃಷ್ಟಿಸಿ, ಬಳಿಕ ಆ ಪ್ರಪಂಚವನ್ನು ಪೋಷಿಸುತ್ತಿದ್ದು, ತದನಂತರದಲ್ಲಿ ವಿಶ್ವಸಂಹಾರಿಯೂ ಆಗುತ್ತಾ, ಹೀಗೆ ಮೂರುಬಗೆಯಾದ ಸ್ವರೂಪವನ್ನೊಳಗೊಂಡಿರುವ ಭಗವಂತನಾದ ನಿನಗೆ ವಂದನೆಯನರ್ಪಿಸುವೆವು. ಮುಗಿಲಿನಿಂದ ಸುರಿಯುವ ಮಳೆಯನೀರು- ಒಂದೇಬಗೆಯಾದ ಸವಿಯನ್ನೊಳಗೊಂಡಿದ್ದರೂ, ಬೇರೆಬೇರೆ ಸ್ಥಳಗಳಲ್ಲಿ ಬಿದ್ದು, ಭಿನ್ನಭಿನ್ನವಾದ ರುಚಿಯನ್ನುಪಡೆಯುವಹಾಗೆ, ಎಲೈ ದೇವನೇ ! ನೀನೂ ಬೇರುಬೇರಾದ ಗುಣಗಳನ್ನಾಶ್ರಯಿಸಿ, ಸೃಷ್ಟಿಯೇ ಮುಂತಾದ ಕೆಲಸಗಳನ್ನು ಮಾಡುವೆ. ಎಲೈ ಸರ್ವಶಕ್ತನೇ ! ಯಾವನೊಬ್ಬನೂ - ನಿನ್ನ ಇಯತ್ತೆಯನ್ನು ಅರಿಯಲಾರ, ಎಲ್ಲ ಲೋಕಗಳನ್ನೂ ನೀನು ಅಳೆಯಬಲ್ಲೆ. ನೀನಾದರೆ ನಿಸ್ಪೃಹನು. ಎಲ್ಲರ ಪ್ರಾರ್ಥನೆಗಳನ್ನೂ

---

* ಪೂರ್ವದಲ್ಲಿ ಮಾತಲಿಯಿಂದ ಪ್ರಾರ್ಥಿಸಲ್ಪಟ್ಟ ಭಗವಂತನು - ಮಾತಲಿಯ ತಂಗಿಯಾದ ಗುಣಕೇಶಿಗೆ ಪತಿಯಾಗಿದ್ದ ನಾಗನಿಗೆ ಭಯವಿಲ್ಲದಂತೆ ಅಭಯದಾನ ಮಾಡಿದನು. ವಾಹನವಾಗಿದ್ದರೂ ತನ್ನ ಶತ್ರುಪಕ್ಷವನ್ನು ರಕ್ಷಿಸಿದನೆಂದು ಗರುಡನಿಗೆ ಸಿಟ್ಟುಹತ್ತಿತು. ಹರಿಯು - ತನ್ನ ಕಾಲಕಿರಿಬೆರಳಿನ ಭಾರದಿಂದ, ಕೊಬ್ಬಿದ್ದ ಗರುತ್ಮಂತನ ಹೆಮ್ಮೆಯನ್ನು ಅಡಗಿಸಿ ತಗ್ಗಿಸಿದನು, ಎಂದು ಭಾರತಕಥೆ,

ಸಲ್ಲಿಸತಕ್ಕವನು. ನಿನ್ನನ್ನು ಗೆಲ್ಲುವವರೇ ಇಲ್ಲ. ನಿನಗೆ ಸೋಲದವರೂ ಇಲ್ಲ. ನೀನೊಬ್ಬರಿಗೂ ಕಾಣಬರೆ. ಕಂಸು ಕಾಣಬರದಿರುವುದೆಲ್ಲಕ್ಕೂ ನೀನೇ ಕಾರಣನು. ಎಲೈ ಸರ್ವವ್ಯಾಪಕನೇ! ಪ್ರಾಜ್ಞರು - ನಿನ್ನನ್ನು ಎಲ್ಲರ ಹೃದಯದಲ್ಲಿರುವವನನ್ನಾಗಿಯೂ, ಯಾರಿಗೂ ಗೋಚರಿಸದಿರುವುದರಿಂದ ದೂರದಲ್ಲಿರತಕ್ಕವನನ್ನಾಗಿಯೂ ಹೇಳುತ್ತಾರೆ. ಯಾವುದೊಂದರಲ್ಲಿಯೂ ಅಭಿಲಾಷೆಯಿಲ್ಲದಿದ್ದರೂ, ನೀನು ತಪವನ್ನಾಚರಿಸುತಲಿರುವೆಯಂತೆ ? ಹೆರರಿಗುಂಟಾಗುವ ತೊಂದರೆಯನ್ನು ಪರಿಹರಿಸುವ ಕನಿಕರವು ನಿನ್ನ ಎದೆಯಲ್ಲಿ ನೆಲೆಗೊಂಡಿರುವುದೆಂತಲೂ, ನಿತ್ಯಾನಂದ ರೂಪನಾದುದರಿಂದ * ದುಃಖಶೂನ್ಯನೆಂತಲೂ, ಬಲು ಹಳಬನಾದರೂ ಮುಪ್ಪಿಲ್ಲದವನೆಂತಲೂ ಹೇಳುವರು. ಸ್ಫಟಿಕ ಶಿಲೆಯು - ತನ್ನ ಹತ್ತಿರದಲ್ಲಿರುವ ಬೇರೆ ಬಣ್ಣದ ವಸ್ತುವಿನಿಂದ ತಾನೂ ಬೇರೆ ವರ್ಣವನ್ನು ಪಡೆಯುವಹಾಗೆ- ನೀನು ಒಬ್ಬನೇ ಆದರೂ, ಕಾರಣ ಭೇದದಿಂದ ಭಿನ್ನಸ್ಥಿತಿಯನ್ನು ಹೊಂದುತ್ತೀಯೆ ಎಂದೆನ್ನುವರು. ಸರ್ವವನ್ನೂ ನೀನು ಬಲ್ಲೆ, ಯಾರೂ ನಿನ್ನನ್ನು ಕಾಣರು. ಸರ್ವಕ್ಕೂ ನೀನೇ ಕಾರಣನು. ನೀನೇ ಸರ್ವರೂಪವನ್ನೂ ಪಡೆಯಬಲ್ಲೆ. ಎಲ್ಲಕ್ಕೂ ನೀನೇ ಒಡೆಯ, ನಿನಗೆ ಬೇರೆ ಒಡೆಯರಿಲ್ಲ. ನೀನು ಒಬ್ಬ, ನಿನ್ನ ರೂಪಗಳು ಅನಂತವಾಗಿವೆ. ರಥಂತರ ಮೊದಲಾದ ಏಳು ಬಗೆಯ ಸಾಮಗಳಿಂದ ನಿನ್ನನ್ನು ಹೊಗಳುವರು. ಸಪ್ತಾರ್ಣವ ಜಲದಲ್ಲಿ ಪವಳಿಸಿದ್ದೀಯೆ. ಆಹಾರಗಳನ್ನೆಲ್ಲ ಪರಿಗ್ರಹಿಸಲಿಕ್ಕೆ ನಿನಗೆ ಅಗ್ನಿಯೇ ಬಾಯಿ ಎಂತಲೂ, ಈರೇಳು ಲೋಕಗಳಿಗೂ ನೀನೇ ಆಸರೆ ಎಂತಲೂ ಹೇಳುವರು. ನಾಲ್ಕು ಪುರುಷಾರ್ಥಗಳ ಜ್ಞಾನ, ನಾಲ್ಕು ಯುಗಗಳ ಕಾಲದ ಪರಿಮಾಣ, ನಾಲ್ಕುವರ್ಣಗಳಿಂದ ತುಂಬಿದ ಲೋಕ, ಎಂಬಿದೆಲ್ಲವೂ ನಾಲ್ಮೊಗನಾದ ನಿನ್ನಿಂದಲೇ ಉಂಟಾಯಿತಂತೆ. ಯೋಗಿಗಳು-ಅಭ್ಯಾಸದಿಂದ

* ಹೊಟ್ಟೆಯಕಿಚ್ಚಿನವನು, ಕನಿಕರವಿಲ್ಲದವನು, ಅತೃಪ್ತನು, ಸಿಟ್ಟುಗಾರನು, ಸಂಶಯಾತ್ಮನು, ಹೆರರ ಸಿರಿಯಿಂದ ಬಾಳುವವನು, ಈ ಆರುಮಂದಿಯೂ ನಿತ್ಯ ದುಃಖಿಗಳು ಎಂದು ಭಾರತ,

ವಶಪಡಿಸಿಕೊಂಡ ಮನಸ್ಸಿನಿಂದ, ಹೃದಯದಲ್ಲಿ ಅಡಗಿರುವ ಜ್ಯೋತಿ ರ್ಮಯನಾದ ನಿನ್ನನ್ನು ಹುಡುಕಿ, ದುಃಖದ ಬಿಡುಗಡೆಗಾಗಿ ಸೇವಿಸು ತ್ತಾರೆ. ಜನ್ಮವಿಲ್ಲದವನಾದರೂ ಹುಟ್ಟುತಲೂ, ಆಶೆಯಿಲ್ಲದವನಾದರೂ ಹಗೆಗಳನ್ನಿರಿಯುತಲೂ, ಎಚ್ಚರದಲ್ಲಿರುವವನಾದರೂ ಮಲಗುತಲೂ ಇರುವ ನಿನ್ನ ತತ್ತ್ವವನ್ನು ಬಲ್ಲವರಾರು? ಕೃಷ್ಣಾದಿ ರೂಪದಿಂದ ಶಬ್ದಾದಿ ವಿಷಯಗಳನ್ನು ಅನುಭವಿಸಲಿಕ್ಕೂ, ನರನಾರಾಯಣಾದಿ ರೂಪ ದಿಂದ ಅಸದಳವೆನಿಸಿದ ತಪವನ್ನಾಚರಿಸಲಿಕ್ಕೂ, ದೈತ್ಯರನ್ನಿರಿವುದರಿಂದ ಪ್ರಜೆಗಳನ್ನು ಪಾಲಿಸಲಿಕ್ಕೂ, ಒಂದಕ್ಕೂ ಸಿಲುಕದೆ ತಟಸ್ಥನಾಗಿರ ಲಿಕ್ಕೂ, ನಿನ್ನನ್ನು ಬಿಟ್ಟರೆ ಮತ್ತಾರು ಸಮರ್ಥರು? ಪುರುಷಾರ್ಥಗ ಳನ್ನು ಪಡೆಯಲಿಕ್ಕೆ ಉಪಾಯಗಳೆನಿಸಿದ ಶಾಸ್ತ್ರಗಳ ಹಾದಿಗಳು-ಲೋಕ ದಲ್ಲಿ ಬೇರುಬೇರಾಗಿವೆ. ಆದರೂ ಬೇರುಬೇರಾಗಿಯೇ ಹರಿಯುತಲಿ ರುವ ಗಂಗೆಯ ಕಾಲುವೆಗಳೆಲ್ಲವೂ ಕಡಲಿನಲ್ಲಿಯೇ ಹೋಗಿ ಬೀಳುವ ಹಾಗೆ, ಅವೆಲ್ಲವೂ ಯಾವುದೋ ಒಂದು ರೂಪದಿಂದ ನಿನ್ನಲ್ಲಿಯೇ ಬಂದು ಕಲೆಯುವುವು. ನಿನ್ನಲ್ಲಿಯೇ ಮನವನ್ನಿಟ್ಟು, ಮಾಡುವ ಎಲ್ಲ ಕರ್ಮಗ ಳನ್ನೂ ನಿನಗೇ ಸಮರ್ಪಿಸುತಲೂ ಇರುವ ವಿರಾಗಿಗಳು - ಮರಳಿ ಹಿಂದಿ ರುಗದಿರುವುದಕ್ಕೆ ನೀನೇ ಗತಿಯಲ್ಲದೆ ಬೇರಿಲ್ಲ. ನಿನ್ನಯ ಮಹಿಮೆ ಎನಿಸಿ, ಇದಿರಿಗೂ ಕಾಣಬರುವ ಭೂಮಿ ಮೊಲಾದುದೇ ಅಳೆಯಲಸದ ಳವೆನಿಸಿರುವಲ್ಲಿ, ಆಪ್ತವಚನಗಳೆನಿಸಿದ ವೇದಗಳಿಂದಲೂ, ಅನುಮಾನ ವೆಂಬ ಪ್ರಮಾಣದಿಂದಲೂ ಸಾಧಿಸಬೇಕಾಗಿರುವ ನಿನ್ನನ್ನು ಅಳೆಯಲು ದಾರಿಯೆಲ್ಲಿ? ನೆನೆದ ಮಾತ್ರದಿಂದಲೇ ಸ್ಮರಿಸಿದವನನ್ನು ಪಾವನನನ್ನಾಗಿ ಮಾಡಬಲ್ಲ ನಿನ್ನ ದರ್ಶನ ಸ್ಪರ್ಶನ ಮುಂತಾದವುಗಳಿಂದ ಇನ್ನೆಂತಹ ಫಲಗಳುಂಟಾಗುವುವೋ ಅವುಗಳನ್ನು ವಿವರಿಸಿ ಹೇಳಲು ನಮಗೆ ಅಳವೆ! ಕಡಲಿನಲ್ಲಿನ ರತ್ನಗಳಹಾಗೂ, ರವಿಯ ಕಿರಣಗಳಹಾಗೂ, ಎಣಿಸಿ ನುತಿ ಸಲಿಕ್ಕಳವಲ್ಲದೆ ನಿನ್ನಯ ದಿವ್ಯ ಚರಿತ್ರೆಗಳು ಬೆಳಗುತಲಿವೆ. ಇದುವರೆಗೆ ಪಡೆಯದೆ, ಹೊಸದಾಗಿ ನೀನು ಪಡೆಯಬೇಕಾದುದೊಂದೂ ಇಲ್ಲ. ನಿನ್ನಯ ಅವತಾರಗಳಿಗೂ, ಆಯಾ ಅವತಾರಗಳಲ್ಲಿನ ನಿನ್ನ ಕಾರ್ಯಗ ಳಿಗೂ, ಲೋಕವನ್ನು ಅನುಗ್ರಹಿಸುವುದೊಂದೇ ಫಲವಾಗಿರುವುದು.

ನಿನ್ನ ಮಹಿಮೆಯನ್ನು ಹೊಗಳುವ ಹಳೆಯ ಮಾತುಗಳು ಸುಮ್ಮನಾ ಗುವುದು - ಬಳಲಿಯೋ, ಅಥವಾ ನಿನ್ನ ಗುಣಗಳನ್ನೆಲ್ಲ ಎಣಿಸಿ-ಇಷ್ಟು, ಇಂಥವು, ಎಂದು ಬಣ್ಣಿಸಲಳವಲ್ಲದೆಯೋ ಹೇಳಲಿಕ್ಕಾಗದು.

ಇಂತಾ ಅಮರರು-ಅಧೋಕ್ಷಜನನ್ನು ನುತಿಗೈದು ಪ್ರಸನ್ನನನ್ನಾಗಿ ಮಾಡಿಕೊಂಡರು. ಆದರೆ - ಸುರರಾಚರಿಸಿದ ಹರಿಸ್ತುತಿಯು - ಮೊದ ಲಿದ್ದ ಗುಣಗಳನ್ನೇ ಹೇಳತಕ್ಕುದಾಗಿದ್ದಿತಲ್ಲದೆ, ಇಲ್ಲದುದನ್ನು ಬಣ್ಣಿಸು ವುದಾಗಿಯಾಗಲೀ, ಸೂಕ್ಷ್ಮವಾಗಿರುವುದನ್ನು ಹೆಚ್ಚಿಸಿ ಹೇಳತಕ್ಕುದಾ ಗಿಯಾಗಲೀ ಇರಲಿಲ್ಲ. ಕುಶಲಪ್ರಶ್ನೆಯಿಂದ ಪ್ರೀತಿಯನ್ನು ವ್ಯಕ್ತಗೊ ಳಿಸಿದ ಹರಿಯ ಮುಖರಾಗದಿಂದ ಆ ಮಧುವೈರಿಯ ಪ್ರಸನ್ನತೆಯನ್ನು ಸುರರು ಅರಿತರು. ಪ್ರಳಯಸಮಯವೊದಗದೆಯೇ, ಆ ರಕ್ಕಸನೆಂಬ ಕಡಲು-ದಡವನ್ನು ದಾಟಿ, ಉಕ್ಕಳಿಸಿ ಬರುವುದರಿಂದ ಉಂಟಾಗುತಲಿ ರುವ ಭಯವನ್ನು ಆತನಿಗೆ ಬಿನ್ನವಿಸಿದರು .—

ತರುವಾಯ - ಪಾರಾವಾರದ ತೀರದಲ್ಲಿನ ಗಿರಿಗಳ ಗವಿಗಳಲ್ಲಿಯೂ ಪ್ರತಿಧ್ವನಿಯುಂಟಾಗುವಂತೆ, ಸಾಗರದ ಶಬ್ದವನ್ನು ಮೀರಿರುವ ಗಂಭೀ ರವಾದ ಧ್ವನಿಯಿಂದ ನಾರಾಯಣನವರಂ ಕುರಿತು ಇಂತೆಂದನು — ಪುರಾಣಪುರುಷನಾದ ಆ ಇಂದಿರಾರಮಣನ ಎದೆ, ಕೊರಳು, ಮೊದಲಾ ದವುಗಳಿಂದ ಸರಿದುಬರುವ ಸರಸ್ವತಿಯು - ಸ್ವರವ್ಯಂಜನಗಳ ಸಾಧುತೆ ಯಿಂದಲೂ, ಸ್ಪಷ್ಟತೆಯಿಂದಲೂ ಒಡಗೂಡಿ, ಅಸಂಭವವೆನಿಸದೆಯೂ, ಸಂಶಯಾಸ್ಪದವಲ್ಲದೆಯೂ ಹೃದಯಂಗಮವಾಗಿದ್ದಿತು. ಅಂದವಾದ ಹಲ್ಲುಗಳ ಬೆಳಕಿನಿಂದೊಡಗೂಡಿ, ವಿಷ್ಣುವಿನ ವದನಾರವಿಂದದಿಂದ ಹೊರಗೆ ಬರುತಲಿರುವ ಭಾರತಿಯು - ಮೊದಲು ಚರಣತಲದಿಂದ ಸರಿದು ಉಳಿದಿದ್ದು, ಊರ್ಧ್ವವಾಹಿನಿಯಾಗಿ ಹರಿಯತೊಡಗಿದ ಭಾಗೀರಥಿಯಂತೆ ಬೆಳಗುತಲಿದ್ದಿತು.

ಎಲೈ ದೇವತೆಗಳಿರಾ ! ತಮೋಗುಣದಿಂದ ಆಕ್ರಮಿಸಲ್ಪಟ್ಟ ಶರೀರಿಗಳ ಸತ್ವರಜೋಗುಣಗಳಹಾಗೆ, ನಿಮ್ಮಗಳ ಮಹಿಮ ಪೌರುಷಗ ಳೆರಡೂ ರಾವಣನೆಂಬ ರಕ್ಕಸನಿಂದ ಆಕ್ರಮಿಸಲ್ಪಟ್ಟಿರುವುವೆಂಬುದನ್ನು ನಾನು ಬಲ್ಲೆನು. ಪ್ರಮಾದವಶದಿಂದ ಘಟಿಸಿದ ಪಾಪದಿಂದ ಸತ್ಪುರುಷನ

ಹೃದಯವು ಸಂತಪಿಸುವಂತೆ, ಆ ರಾವಣನಿಂದ ಮೂಲೋಕವೂ ತಪಿಸು ತಲಿರುವುದನ್ನೂ ನಾನು ಅರಿತಿದೇನೆ. ರಾವಣಹನನವೆಂಬ ಪ್ರಕೃತ ಕಾರ್ಯವು - ನಿಮಗೂ, ನನಗೂ ಸಮಾನವಾಗಿರುವುದರಿಂದ, ಇಂದ್ರನು - ‹‹ ಈ ಕೆಲಸವನ್ನು ನೀನು ಮಾಡಬೇಕು ,, ಎಂದು ನನ್ನನ್ನು ಪ್ರಾರ್ಥಿಸಬೇಕಾದುದಿಲ್ಲ. ವಾಯುವು - ಅಗ್ನಿಗೆ ಸಾರಥ್ಯವನ್ನೆಸಗಲು ತಾನಾಗಿಯೇ ಪ್ರವರ್ತಿಸುವುದಲ್ಲದೆ ಅಗ್ನಿಯ ಪ್ರಾರ್ಥನೆಯಿಂದಲ್ಲ. ಪೂರ್ವದಲ್ಲಿ ಆ ಸುರಾರಿಯು - ತನ್ನ ಶಿರಗಳನ್ನು ಖಡ್ಗಧಾರೆಯಿಂದರಿದು, ತ್ರಿಪುರಾರಿಯನ್ನು ಆರಾಧಿಸುತಲಿರುವ ಸಮಯದಲ್ಲಿ - ನನ್ನ ಚಕ್ರಕ್ಕೆ ಕೊಡಬೇಕಾದ ಭಾಗವೆಂಬಂತೆ ಹತ್ತನೆಯ ತಲೆಯನ್ನು ಉಳಿಸಿರುವನು. ಹಾಗಾದರೆ, ಇದುವರೆಗೆ ಅಸಡ್ಡೆ ಮಾಡಿರಲು ಕಾರಣವೇನು ಎಂಬಿರೋ ? ಸೃಷ್ಟಿಕರ್ತನಾದ ಚತುರ್ಮುಖನ ವರದಾನದಿಂದ ಮೆರೆಯುವ ಆ ರಕ್ಕಸನ ಹೊಮ್ಮಿದ ಹೆಮ್ಮೆಯನ್ನು, ಸರ್ಪದ ಕೊಬ್ಬನ್ನು ಚಂದನ ತರುವು ಹೇಗೋ ಹಾಗೆ, ಸಹಿಸುತಲಿದೇನೆ. ಆ ರಾಕ್ಷಸನು - ಹಿಂದೆ ತೀವ್ರವಾದ ತಪದಿಂದ ಚತುರಾನನನನ್ನು ತೃಪ್ತಿಗೊಳಿಸಿ, ಮನುಜರನ್ನು ಲೆಕ್ಕವಿಡದೆ, ಎಂಟು ಬಗೆಯಾಗಿರುವ ದೈವಸೃಷ್ಟಿಯಿಂದಲೂ ತನಗೆ ಸಾವು ಉಂಟಾಗದಂತೆ ವರವನ್ನು ಬೇಡಿಕೊಂಡಿರುವನು. ಆದರೆ ಮುಂದೇನು ಗತಿ ಎನ್ನುವಿರೋ ? ಈ ನಾನೇ ರಾಮನಾಮದಿಂದ ದಶರಥ ನಂದನನಾಗಿ ಅವತರಿಸಿ, ನನ್ನ ಶರಗಳಿಂದಿರಿದ ಆ ದುರುಳನ ಶಿರಗಳೆಂಬ ಸಾರಸಗಳಿಂದ ರಣಲಕ್ಷ್ಮಿಯನ್ನು ಆರಾಧಿಸುವೆನು. ಎಲೈ ಸುಮನಸರುಗಳಿರಾ ! ಯಾಜ್ಞಿಕರು - ವಿಧಿಪ್ರಕಾರ ನಿಮಗಾಗಿ ಕಲ್ಪಿಸುವ ಹವಿರ್ಭಾಗಗಳನ್ನು, ಮಾಯಾವಿಗಳಾದ ರಕ್ಕಸರ ಸ್ಪರ್ಶವಿಲ್ಲದಂತೆ ಸ್ವಲ್ಪ ಕಾಲದಲ್ಲಿಯೇ ನೀವು ಮರಳಿ ಸ್ವೀಕರಿಸತಕ್ಕವರಾಗುವಿರಿ. ಆಕಾಶ ಮಾರ್ಗದಲ್ಲಿ ವಿಮಾನದಿಂದ ಸಂಚರಿಸುವ ಸುಕೃತಶಾಲಿಗಳು - ಮಾರ್ಗವಶದಿಂದ ಅಕಸ್ಮಾತ್ತಾಗಿ ರಾವಣನ ಪುಷ್ಪಕವಿಮಾನವನ್ನು ಕಂಡರೆ, ಆ ಕೂಡಲೆ ಮೋಡಗಳ ಮರೆಯಲ್ಲಿ ಅವಿತುಕೊಂಡು, ಅಂಜುವುದನ್ನು ಇನ್ನುಮೇಲೆ ತೊರೆಯಲಿ. ನಲಕೂಬರನಿಂದ ಶಪ್ತನಾಗಿ, ಬಲಾತ್ಕರಿಸಲು ಯತ್ನವಿಲ್ಲದೆ, ಅಪಹರಿಸಿ ಕೊಂಡೊಯ್ದು, ಸೆರೆಮನೆಯಲ್ಲಿ

ಸಿಲುಕಿರುವುದರಿಂದ, ಸಂಸ್ಕರಿಸಿಕೊಳ್ಳದಿರುವ ಸುರಾಂಗನೆಯರ ತಲೆಗೂದಲಿನ ತಿರಿಗಳನ್ನು ಬೇಗನೆ ಬಿಡಿಸುವಿರಿ. ಎಂದೀಪ್ರಕಾರ ಆ ಕೃಷ್ಣ ಮೇಘವು - ವೈಶ್ರವಣನೆಂಬ ಅನಾವೃಷ್ಟಿಯಿಂದ ಬಳಲಿರುವ ಸುರರೆಂಬ ಸಸ್ಯಕ್ಕೆ ವಾಗಮೃತವನ್ನು ವರ್ಷಿಸಿ, ಅದೃಶ್ಯವಾಯಿತು.

ಬಳಿಕ - ಅಮರೇಂದ್ರನೇ ಮೊದಲಾದ ನಿರ್ಜರರು - ವೃಷ್ಟಿಗಳು - ತಮ್ಮ ಭಾಗಗಳಿಂದ ವಾಯುವನ್ನು ಹೇಗೋಹಾಗೆ, ದೇವಕಾರ್ಯಾರ್ಥವಾಗಿ ಉದ್ಯುಕ್ತನಾಗಿರುವ ವಿಷ್ಣುವನ್ನು ಅನುಸರಿಸಿ, ತಂತಮ್ಮ ಅಂಶಗಳಿಂದ ವಾನರರಲ್ಲಿ ಸುಗ್ರೀವಾದಿ ರೂಪದಿಂದ ಜನಿಸಿದರು.

ಇತ್ತ - ಪ್ರಜಾಪಾಲನಾದ ದಶರಥನು ಆಚರಿಸುತಲಿದ್ದ ಪುತ್ರಕಾಮೇಷ್ಟಿಯೆಂಬ ಕಾಮ್ಯಕರ್ಮದ ಕಡೆಯಲ್ಲಿ - ಅಗ್ನಿಮಧ್ಯದಿಂದ ಒಬ್ಬ ದಿವ್ಯಪುರುಷನು - ಋತ್ವಿಕ್ಕುಗಳ ವಿಸ್ಮಯದೊಡನೆ ಆವಿರ್ಭವಿಸಿದನು. ಆತನ ಕರತಲದಲ್ಲಿ ದಿವ್ಯಪಾಯಸಪೂರ್ಣವಾದ ಸುವರ್ಣಪಾತ್ರೆಯೊಂದು ಕಂಗೊಳಿಸುತಲಿದ್ದಿತು. ಈರೇಳು ಲೋಕಗಳನ್ನೂ ಉದರದೊಳು ತಳೆದಿರುವ ಆದಿಪುರುಷನ ಅಂಶವು ಆ ಪರಮಾನ್ನದಲ್ಲಿ ಒಳಹೊಕ್ಕಿದ್ದುದರಿಂದ ಆ ದೇವಪುರುಷನು ಕೈಲಿ ಹಿಡಿದಿರಲು ಅಶಕ್ತನಾಗುತ್ತಿದ್ದನು. ಕೂಡಲೆ ಆ ಬ್ರಹ್ಮಪುರುಷನು - ಆ ಪಯಶ್ಚರು ಪಾತ್ರವನ್ನು ಪರಮಾದರದಿಂದ ಪೃಥ್ವೀಪಾಲನಿಗಿತ್ತನು. ಕ್ಷೀರಸಾಗರ ಸಾರವಾದ ಅಮೃತವನ್ನು ವಾಸವನು ಹೇಗೋಹಾಗೆ, ಅರಸು ಅದನ್ನು ಪರಿಗ್ರಹಿಸಿದನು. ತ್ರಿಭುವನ ಕಾರಣನಾದ ನಾರಾಯಣನೇ ಈತನಲ್ಲಿ ಅವತರಿಸಲೆಳಸಿದುದರಿಂದ ಮಹಾರಾಜನ ಗುಣಗಳು ಎಣೆಯಿಲ್ಲದವುಗಳೆಂಬುದೂ ಇತರಾಸಾಧಾರಣಗಳೆಂಬುದೂ ವ್ಯಕ್ತವಾಯಿತು.

ಬಳಿಕ ವಿಶ್ವಂಭರಾಧಿಪತಿಯು - ಚರುಸಂಜ್ಞೆಯ ಆ ವೈಷ್ಣವ ತೇಜಸ್ಸನ್ನು ತನ್ನ ಪತ್ನಿಯರಾದ, ಕೌಸಲ್ಯಾ ಕೇಕೇಯಿಯರಿಗೆ ಹಂಚಿದನು - ದಿವಾಕರನು - ತನ್ನ ಎಳೆಬಿಸಿಲನ್ನು, ದ್ಯಾವಾಭೂಮಿಗಳಿಗೆ ಹಂಚಿದಾತಿದ್ದಿತು. ಮೂರುಮಂದಿ ಹೆಂಡತಿಯರಿರುವಲ್ಲಿ ಇಬ್ಬರಿಗೆ ಮಾತ್ರವೇ ಪಾಲುಮಾಡಿ ಕೊಡಲು ಕಾರಣವೇನೆಂದರೆ—ಕೋಸಲ ರಾಜಪುತ್ರಿಯು ಹಿರಿಯ ಹೆಂಡಿರಾಗಿ ಮಾನ್ಯಳೆನಿಸಿದ್ದಳು ಕೇಕಯ

ರಾಜನಂದನೆಯೂ ಕಿರಿಯ ಹೆಂಡತಿಯಾದುದರಿಂದ ಬಹು ಪ್ರೀತಿಪಾತ್ರಳಾಗಿದ್ದಳು. ಆ ಕಾರಣ ಅವರೀರ್ವರಿಂದಲೂ ಸುಮಿತ್ರೆಯನ್ನು ಸಂಭಾವಿತಳನ್ನಾಗಿ ಮಾಡಬೇಕೆಂದು ಭೂಪತಿಯು ಬಯಸಿದ್ದನು.

ಆ ಹಿಂದೆ - ಉಚಿತಜ್ಞನಾದ ವಸುಮತೀಶನ ಚಿತ್ತವೃತ್ತಿಯನ್ನರುವುದರಲ್ಲಿ ಚತುರರಾದ ಅವರೀರ್ವರೂ - ತಮ್ಮ ಭಾಗಗಳ ಅರ್ಧಾರ್ಧಭಾಗಗಳಿಂದ, ಸುಮಿತ್ರೆಯನ್ನು ಸಂಭಾವಿಸಿದರು. ಆದರೆ - ದ್ವಿರದದ ಕಪೋಲಗಳ ಮದೋದಕ ರೇಖೆಗಳಲ್ಲಿ, ಭ್ರಮರಿಯು ಹೇಗೋಹಾಗೆ, ಸುಮಿತ್ರೆಯೂ ತನ್ನ ಸವತಿಯರಲ್ಲಿ ಸಮಾನ ಪ್ರೀತಿಯುಳ್ಳವಳಾದಳಲ್ಲದೆ ಅಸೂಯಾಪರಳಾಗಲಿಲ್ಲ. ಆಮೇಲೆ - ಮಳೆಗರೆವ ನಾಡಿಗಳೆನಿಸಿದ ರವಿಯ ಅಮೃತಗಳೆಂಬ ದೀಧಿತಿಗಳು - ಜಲಮಯವಾದ ಗರ್ಭವನ್ನು ಹೇಗೋಹಾಗೆ, ಆ ಮೂವರೂ - ದೇವಾಂಶ ಕಾರಣವಾದ ಗರ್ಭವನ್ನು ಧರಿಸಿದರು. ಸಮಕಾಲದಲ್ಲಿ ಗರ್ಭಧಾರಣೆಮಾಡಿ, ತುಸ ಬಿಳಿಯಬಣ್ಣವನ್ನಾಂತ ಆ ರಾಜವಲ್ಲಭೆಯರು - ಒಳಗಡಗಿದ ಹೊಡೆಯುನ್ನುಳ್ಳ ಪೈರುಗಳ ಬೆಡಗನ್ನಾಂತು ರಾರಾಜಿಸುತಲಿದ್ದರು.

ಆ ಮೂವರೂ ಇರುಳು ಹೊತ್ತಿನಲ್ಲಿ ಮಲಗಿ ನಿದ್ರಿಸುವಾಗ, ಬೆಳಗಿನ ಜಾವದೊಳಗೆ - ಶಂಖ, ಚಕ್ರ, ಗದೆ, ಖಡ್ಗ, ಚಾಪ ಇವುಗಳನ್ನು ಹಿಡಿದು ವಾಮನಮೂರ್ತಿಗಳಾಗಿರುವ ದಿವ್ಯಪುರುಷರು ತಮ್ಮನ್ನು ಕಾಪಿಡುತಲಿರುವಂತೆ ಕನಸನ್ನು ಕಾಣುತಲಿದ್ದರು. ಚಿನ್ನದ ರೆಕ್ಕೆಯ ಬೆಳಕನ್ನು ಆಗಸದ ಬೈಲಿನಲ್ಲಿ ಬೀರುತ್ತಾ, ಗಮನದ ವೇಗದಿಂದ ಮೋಡಗಳನ್ನು ಸೆಳೆದೊಯ್ಯುತಲೂ ಇರುವ ಗರುತ್ಮಂತನು-ತಮಗೆ ವಾಹನವಾಗಿ ತೆರಳುತಲಿರುವಂತೆಯೂ ಕಂಡರು. ಪತಿಯು ಅಲಂಕರಿಸಿದ ಕೌಸ್ತುಭವೆಂಬ ರತ್ನವನ್ನು ಎದೆಯಲ್ಲಿಳವಟ್ಟು, ಅರಳಿದ ತಾವರೆಯೆಂಬ ಬೀಸಣಿಗೆಯನ್ನು ಕಯ್ಯಲ್ಲಿ ಹಿಡಿದು, ಲಕ್ಷ್ಮಿಯು ತಮ್ಮನ್ನು ಸೇವಿಸುತಲಿರುವಂತೆಯೂ ನೋಡಿದರು. ಮತ್ತು - ಕಶ್ಯಪಾದಿ ಸಪ್ತರ್ಷಿಗಳು - ಆಕಾಶಗಂಗೆಯಲ್ಲಿ ಮಿಂದು, ವೇದರಹಸ್ಯವೆನಿಸಿದ ಪರಬ್ರಹ್ಮನನ್ನು ಸ್ತುತಿಸುತಲಿರುವಹಾಗೂ ಸ್ವಪ್ನದಲ್ಲಿ ಅವಲೋಕಿಸಿದರು. ಬಳಿಕ ಬಲು ಸಡಗರದಿಂದ ಪೃಥ್ವೀಶ್ವರನಿಗಾ ಸ್ವಪ್ನದ ಪರಿಯನೆಲ್ಲ ಬಿತ್ತರಿಸಿದರು.

ಅದಂಕೇಳ್ದ ಅರಸು - ಜಗದ್ಗುರುವಿಗೂ ಗುರುವೆನಿಸಿದ ತನ್ನನ್ನು ಬಹು ಶ್ರೇಷ್ಠನನ್ನಾಗಿ ಭಾವಿಸಿದನು. ಪ್ರತಿಬಿಂಬ ಚಂದ್ರನು - ನಿರ್ಮಲಗಳಾದ ಜಲಾಶಯಗಳಲ್ಲಿ ಹೇಗೋಹಾಗೆ, ಸರ್ವಾತ್ಮನೆನಿಸಿದ ಮಹಾವಿಷ್ಣುವೊಬ್ಬನಾದರೂ, ರಾಜಪತ್ನಿಯರ ಉದರಗಳಲ್ಲಿ ವಿಭಕ್ತಾತ್ಮನಾಗಿ ವಾಸಮಾಡುತಲಿದ್ದನು.

ಆ ಬಳಿಕ - ದಶರಥನಿಗೆ ಅಗ್ರ್ಯಮಹಿಷಿಯೆನಿಸಿರುವ, ಸತೀಶಿರೋಮಣಿಯಾದ ಕೌಸಲ್ಯೆಯು - ಇರುಳು ಹೊತ್ತಿನಲ್ಲಿ ಜ್ಯೋತಿರ್ಲತೆಯು - ಕತ್ತಲನ್ನು ಕತ್ತರಿಸಲು ತಕ್ಕುದೆನಿಸಿದ ಬೆಳಕನ್ನು ಹೇಗೋಹಾಗೆ, ಪ್ರಸವ ಕಾಲವು ಸಮನಿಸಲು, ತಮೋನಾಶಕನಾದ ತನಯನನ್ನು ಹಡದಳು. ಅಭಿರಾಮವೆನಿಸಿದ ಮಗುವಿನ ರೂಪವು ತಂದೆಯನ್ನು ಪ್ರೇರಿಸಿತು, ಅದರಿಂದಲೇ ಅರಸು - ಪುತ್ರನಿಗೆ ಜಗತ್ಪ್ರಥಮ ಮಂಗಳವೆನಿಸಿದ ರಾಮ ಎಂಬ ಹೆಸರನ್ನು ಇಟ್ಟನು. ರಘುವಂಶಕ್ಕೆ ಪ್ರಕಾಶಕನೆನಿಸಿದ ಆ ರಾಮನ ಎಣೆಯಿಲ್ಲದ ದೇಹಪ್ರಭೆಯಿಂದ ಸೂತಿಕಾಗೃಹದ ದೀವಿಗೆಗಳು - ಮಿಂಚಿನದೀಪದ ಬಳಿಯಲ್ಲಿಟ್ಟ ಎಣ್ಣೆಯ ಸಣ್ಣ ದೀಪಗಳಂತಿದ್ದುವು. ಶರದೃತುವಿನಲ್ಲಿ ಸಣ್ಣದಾಗಿ ಹರಿಯುತಲಿರುವ ಜಾಹ್ನವಿಯ ಹೊಳೆಯು-ಪಕ್ಕದಲ್ಲಿನ ನಿರ್ಮಲವಾದ ಮಳಲಿನಮೇಲೆ ಪೂಜಾರ್ಥವಾಗಿ ಬಪ್ಪಿಸಿರುವ ಅರಳಿದ ತಾವರೆಯಿಂದ ಹೇಗೋಹಾಗೆ, ಕೃಶೋದರಿಯಾದ ಕೌಸಲ್ಯೆಯು - ಪಾರ್ಶ್ವದಲ್ಲಿ ಹೊಳೆಯುವ ಹಾಸಿನಮೇಲೆ ಪವಳಿಸಿರುವ ರಾಮನಿಂದ ಬೆಳಗುತಲಿದ್ದಳು. ಬಳಿಕ ಕೇಕಯ ರಾಜನಂದನೆಯಾದ ಕೈಕೇಯಿಯು - ಸುಶೀಲನಾದ ಭರತನೆಂಬ ಕುವರನನ್ನು ಹೆತ್ತಳು. ಆ ವರಕುಮಾರನು - ವಿನಯವು ಸಿರಿಯನ್ನು ಹೇಗೋಹಾಗೆ, ತನ್ನ ತಾಯನ್ನು ಅಲಂಕರಿಸುತ್ತಿದ್ದನು. ಚೆನ್ನಾಗಿ ಅಭ್ಯಾಸ ಮಾಡಿದರೆ ವಿದ್ಯೆಯು - ತತ್ತ್ವಜ್ಞಾನೇಂದ್ರಿಯ ಜಯಗಳನ್ನು ಹೇಗೋಹಾಗೆ, ಯಮಳರಾದ ಲಕ್ಷ್ಮಣ ಶತ್ರುಘ್ನರೆಂಬ ಸುತರನ್ನುಸುಮಿತ್ರೆಯು ಪಡೆದಳು.

ಆಗ - ಲೋಕವೆಲ್ಲವೂ - ದುರ್ಭಿಕ್ಷ ಮೊದಲಾದ ಯಾವುದೊಂದು ದೋಷವೂ ಇಲ್ಲದೆ, ಆರೋಗ್ಯವೇ ಮುಂತಾದ ಸುಗುಣಗಳಿಂದ

ತುಂಬಿದುದಾಯಿತು. ಇದರಿಂದ ಭೂಲೋಕದಲ್ಲಿ ಅವತರಿಸಿದ ಪುರುಷೋತ್ತಮನನ್ನು, ನಿರ್ದೋಷವೂ, ಗುಣವುಳ್ಳುದೂ ಆಗಿರುವ ಸ್ವರ್ಗವೂ - ಹಿಂಬಾಲಿಸಿ ಬಂದಂತಿದ್ದಿತು. ಸಿರಿಹರಿಯು - ರಾಮನೇ ಮೊದಲಾದ ನಾಲ್ಕುಬಗೆಯ ರೂಪದಿಂದ ಭೂಮಿಯಲ್ಲಿ ಅವತರಿಸಿದನು. ಪೌಲಸ್ತ್ಯನಿಂದ ವ್ಯಥೆಪಡುತಲಿದ್ದ ನಮ್ಮ ನಾಥರಿಗೆ ಗತಿಯು ದೊರೆಯಿತು ಎಂಬ ಹರ್ಷದಿಂದ ಪೂರ್ವವೇ ಮುಂತಾದ ನಾಲ್ಕುಮಂದಿ ದಿಗ್ವನಿತೆಯರೂ ನಿರ್ಮಲವಾದ ಮತ್ತು ಶಾಂತವಾದ ಉಸಿರನ್ನು ಬಿಡುತಲಿರುವರೆಂಬಂತೆ ಎಲ್ಲೆಲ್ಲಿಯೂ ಧೂಳಿಯಿಲ್ಲದ ಮಂದಮಾರುತವು ಬೀಸುತಲಿದ್ದಿತು. ಹೊಗೆಯಿಲ್ಲದೆ ಅಗ್ನಿಯು ಪ್ರಜ್ವಲಿಸುತಲಿದ್ದುದರಿಂದಲೂ, ಮಾಲಿನ್ಯವಿಲ್ಲದೆ ರವಿಯು ಬೆಳಗುತಲಿದ್ದುದರಿಂದಲೂ, ರಾವಣನಿಂದ ನೊಂದ ಅಗ್ನಿ ಸೂರ್ಯರೀರ್ವರೂ - ರಾಮಾವತಾರದಲ್ಲಿ ದುಃಖವನ್ನು ತೊರೆದು ಹರ್ಷಗೊಂಡಿರುವಂತೆ ಕಂಗೊಳಿಸುತಲಿದ್ದರು. ಆ ರಾಮಜನ್ಮ ಕ್ಷಣದಲ್ಲಿ - ರಾವಣ ರಾಜ್ಯಲಕ್ಷ್ಮಿಯ ನೇತ್ರಗಳಿಂದ ಕಣ್ಣೀರಿನ ಹನಿಗಳು - ದಶಕಂಧರನ ಕಿರೀಟಗಳಿಂದ ಮಣಿಗಳ ನೆಪದಿಂದ ನಲಕ್ಕೆ ಉರುಳುತಲಿದ್ದುವು. ಪುತ್ರವಂತನಾದ ದಶರಥನ ರಾಜಧಾನಿಯಲ್ಲಿ ರಾಜಪುತ್ರೋತ್ಸವ ನಿಮಿತ್ತದಿಂದ ನುಡಿಸಬೇಕಾದ ವಾದ್ಯಗಳ ಧ್ವನಿಗಳಿಗಿಂತ ಮೊದಲು, ಸ್ವರ್ಗಲೋಕದಲ್ಲಿ ದೇವದುಂದುಭಿಗಳು ದನಿಗೆಯ್ಯಲಾರಂಭಿಸಿದುವು. ಮತ್ತು - ರಾಜಭವನದಲ್ಲಿ ಮುಗಿಲಿನಿಂದ ಕಲ್ಪತರುಕುಸುಮಗಳ ಮಳೆಯು ಕರೆಯಿತು. ಈ ಪುಷ್ಪವೃಷ್ಟಿಯೇ - ಪುತ್ರಜನ್ಮೋತ್ಸವದಲ್ಲಿ ದಶರಥನು ಅವಶ್ಯಕವಾಗಿ ಮಾಡಬೇಕಾದ ಮಂಗಳೋಪಚಾರಗಳಲ್ಲಿ ಮೊದಲನೆಯ ರಚನೆಯೆನಿಸಿದ್ದುದು.

ಬಳಿಕ ರಾಮಾದಿ ಕುಮಾರರು - ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ಪಡೆದು, ದಾದಿಯರ ಸ್ತನ್ಯವನ್ನು ಪಾನಮಾಡುತ್ತಾ, ತಮಗಿಂತ ಮೊದಲು ಜನಿಸಿ, ಹಿರಿಯುವನೆಂತಿರುವ ತಂದೆಯ ಆನಂದದೊಡನೆ ಸಮವಾಗಿ ಬೆಳವಳಿಗೆಯನ್ನು ಹೊಂದುತ ಬಂದರು. ಆ ಮಕ್ಕಳ ಸಹಜವಾದ ವಿನಯವು - ಯೋಗ್ಯವಾದ ಶಿಕ್ಷೆಯಿಂದ, ಅಗ್ನಿಯ ಸ್ವಾಭಾವಿಕವಾದ ತೇಜಸ್ಸು - ಆಜ್ಯವೇ ಮೊದಲಾದ ಹವಿಸ್ಸಿನಿಂದ ಹೇಗೋ

ಹಾಗೆ, ದಿನದಿನಕ್ಕೂ ಹೆಚ್ಚುತ ಬಂದಿತು. ಅನ್ಯೋನ್ಯ ವಿರೋಧವಿಲ್ಲದೆ ಸೌಭ್ರಾತ್ರದಿಂದೊಡಗೂಡಿರುವ ಆ ಕುಮಾರರು - ವಸಂತವೇ ಮೊದಲಾದ ಋತುಗಳು - ಅಮರರ ನಂದನೋದ್ಯಾನವನ್ನು ಹೇಗೋಹಾಗೆ, ರಘುಕುಲವನ್ನು ವಿಶೇಷವಾಗಿ ಪ್ರಕಾಶಗೊಳಿಸಿದರು. ಸೌಭ್ರಾತ್ರದಿಂದೊಡಗೂಡಿರುವ ಕುಮಾರರೇ ಕುಲಭೂಷಣರೆನಿಸುವರು. ಆ ಸೋದರರ ಒಳ್ಳೆಯ ಗೆಳೆತನವು ಸಮಾನವಾಗಿದ್ದರೂ, ರಾಮಲಕ್ಷ್ಮಣರು ಹೇಗೋಹಾಗೆ, ಭರತಶತ್ರುಘ್ನರೂ ಎಡೆಬಿಡದೆ ಒಡನಾಡಿಗಳಾಗಿರುತ್ತಿದ್ದರು. ಆ ನಾಲ್ವರೊಳಗೆ - ರಾಮಲಕ್ಷ್ಮಣರಿಗೂ, ಹಾಗೆಯೇ ಭರತ ಶತ್ರುಘ್ನರಿಗೂ ವಾಯುವಹ್ನಿಗಳ ಹಾಗೂ, ಚಂದ್ರಸಮುದ್ರಗಳ ಹಾಗೂ ಉಂಟಾಗುವುದು, ಹಿಗ್ಗುವುದು, ತಗ್ಗುವುದು, ಈ ಮೊದಲಾದವುಗಳಲ್ಲಿ ಒಗ್ಗಟ್ಟು - ಎಂದೂ ಬಿಡಿಯಾಗುತಲಿರಲಿಲ್ಲ. ತರುವಾಯ ಆ ದೊರೆಮಕ್ಕಳು - ರಾಜತೇಜಸ್ಸಿನಿಂದಲೂ, ವಿನಯದಿಂದಲೂ, ಬೇಸಗೆಯ ಕಡೆಯಲ್ಲಿ - ಮೋಡಗಳನ್ನೊಳಗೊಂಡು, ಅತಿ ಶೀತೋಷ್ಣಗಳೆನಿಸದ ದಿವಸಗಳಂತೆ ಪ್ರಜೆಗಳ ಮನಗಳನ್ನು ಸೆಳೆಯುತ ಬಂದರು. ನಾಲ್ಕುಬಗೆಯಾಗಿ ನೆಲೆಗೊಂಡಿರುವ ದಶರಥನ ಸಂತಾನವು - ನಾಲ್ಕು ಅಂಗಗಳನ್ನೊಳಗೊಂಡಿರುವ ಧರ್ಮಾರ್ಥ ಕಾಮಮೋಕ್ಷಗಳಂತೆ ರಾರಾಜಿಸುತಲಿದ್ದಿತು. ನಾಲ್ಕು ದಿಗಂತಗಳಿಗೂ ಪ್ರಭುವಾಗಿರುವ ದಶರಥ ಚಕ್ರವರ್ತಿಯನ್ನು ರತ್ನಗಳಿಂದ ರತ್ನಾಕರಗಳು ಹೇಗೋಹಾಗೆ, ಪಿತೃಭಕ್ತರಾದ ಆ ನಾಲ್ವರು ಕುಮಾರರೂ - ವಿನಯಾದಿ ಸುಗುಣಗಳಿಂದ, ತಂದೆಯನ್ನು ಆನಂದಗೊಳಿಸುತಲಿದ್ದರು. ಇಂತು - ದೈತ್ಯರ ಅಸಿಧಾರೆಗಳನ್ನು ಭಂಗಗೊಳಿಸುವ ದಂತಗಳಿಂದೊಡಗೂಡಿದ ಐರಾವತವೆಂಬ ದಿಗ್ಗಜದಹಾಗೂ, ಫಲಸಿದ್ಧಿಯಿಂದ ವ್ಯಕ್ತವಾಗುವ ಪ್ರಯೋಗಗಳನ್ನೊಳಗೊಂಡಿರುವ ಸಾಮಾದ್ಯುಪಾಯಗಳಿಂದ ಸಹಿತವಾದ ರಾಜನೀತಿಯ ಹಾಗೂ, ನೊಗದಂತೆ ನೀಳವಾದ ತೋಳಗಳಿಂದ ಯುಕ್ತನಾದ ಹರಿಯ ಹಾಗೂ, ನರನಾಥ ನಾಥನಾದ ದಶರಥ ಭೂನಾಥನು - ಹರಿಯಂಶಗಳಿಂದ ಅವತರಿಸಿರುವ ನಾಲ್ಕುಮಂದಿ ಪುತ್ರರಿಂದ ವಿರಾಜಿಸುತಲಿದ್ದನು.

— ಇಂತು ರಾಮಾವತಾರವೆಂಬ ಹತ್ತನೆಯ ಅಧ್ಯಾಯಂ —

ಶ್ರೀಃ

ಶ್ರೀ ರಾಮಚನ್ದ್ರಾಯನಮಃ.

# ಹನ್ನೊಂದನೆಯ ಅಧ್ಯಾಯ

ಸೂಚನೆ ॥ ದಶರಥಸುತನಿಂ ಸವನಂ ।
ಕುಶಿಕ ಸುತಂ ಸುಖದಿ ನೆಸಗಿ ಮಿಥಿಲೆಗೆ ತೆರಳಲ್ ।
ಶಶಿಧರ ಧನುವಂ ಖಂಡಿಸಿ ।
ದಶರಥ ಸುತನಾಂತ ನವನಿ ಜಾತೆಯ ಕರವಂ॥

ರಾಮನು ಇನ್ನೂ ಜುಳುಪೆಯ ಕೂದಲಿನ ಚಿಕ್ಕ ಹುಡುಗನಾಗಿಯೇ ಇದ್ದನು. ಅಷ್ಟರಲ್ಲಿ ಒಂದುವೇಳೆ - ಕುಶಿಕ ರಾಜಕುಲದಲ್ಲಿ ಉದಿಸಿದ ವಿಶ್ವಾಮಿತ್ರನೆಂಬ ಮುನಿಯು-ಕ್ಷಿತೀಶ್ವರನಬಳಿಗೆ ಅಭ್ಯಾಗತನಾಗಿ ಬಂದು, ತಾನೊಂದು ಯಾಗವನ್ನು ಮಾಡುತ್ತಿರುವೆನೆಂದೂ, ಅದಕ್ಕೆ ದೈತ್ಯರು ಅಡ್ಡಿಯಾಗಿರುವರೆಂದೂ, ಅವರನ್ನು ಸಂಹರಿಸಿ ವಿಘ್ನವಿಲ್ಲದಂತೆ ಸಹಾಯ ಮಾಡಲು ರಾಮನನ್ನು ಕಳುಹಿಸಬೇಕೆಂದೂ ಭೂಪಾಲನನ್ನು ಬೇಡಿದನು. ಇದು ನ್ಯಾಯವೇ ಸರಿ. ಏಕೆಂದರೆ—ಸಿಂಹವು ಶಿಶುವಾಗಿದ್ದರೂ ಮದವೇರಿದಾನೆಯ ಶಿರವನ್ನು ಬಗೆಯಲು ಅಡರುವುದು. ತೇಜಸ್ವಿನ ಜೊತೆಗೆ ವಯಸ್ಸೂ ಹೆಚ್ಚಿ ಇರಲೇಬೇಕೆಂಬ ನಿಯಮವೇನೂ ಇಲ್ಲ. ಅದರಿಂದಲೇ ತತ್ವಜ್ಞನಾದ ಮುನಿಯು - ರಾಮನನ್ನು ಕಾಕಪಕ್ಷಧರನಾದ ಬಾಲನೆಂದು ಬಗೆಯಲಿಲ್ಲ. ವಿದ್ವಜ್ಜನನ್ನು ಸೇವಿಸುವುದರಲ್ಲಿ ವಿಚಕ್ಷಣನಾದ ದೊರೆಯು - ಬಹುಕಾಲಕ್ಕೆ ಕಷ್ಟದಿಂದ ಪಡೆದಿದ್ದರೂ, ಲಕ್ಷ್ಯವಿಡದೆ ಗುರುಸಮ್ಮತಿಯಿಂದ ಲಕ್ಷ್ಮಣನೊಂದಿಗೆ ರಾಮನನ್ನೂ ವಿಶ್ವಾಮಿತ್ರನಿಗೆ ಒಪ್ಪಿಸಿದನು. ಪ್ರಾಣಗಳನ್ನೇ ನೀಡಬೇಕೆಂದು

ಬೇಡಿದವರ ಪ್ರಾರ್ಥನೆಯೂ ರಘುಕುಲದರಸರಲ್ಲಿ ವ್ಯರ್ಥವಾಗಲಿಲ್ಲ.
ಹೀಗಿರಲು ದಶರಥನು ಪುತ್ರನನ್ನೊಪ್ಪಿಸಿದುದೇನೂ ವಿಸ್ಮಯಕಾರಿಯಲ್ಲ.
ದಶರಥನು - ರಾಮಲಕ್ಷ್ಮಣರು ಹೊರಡುವಾಗ ಪುರಮಾರ್ಗದಲ್ಲಿ ಅಲಂ
ಕರಿಸಬೇಕೆಂದು ಪರಿಜನರಿಗೆ ಆಜ್ಞಾಪಿಸಬೇಕೆಂದಿದ್ದನು, ಅಷ್ಟರಲ್ಲಿಯೇ-
ವಾಯುಸಹಾಯವನ್ನು ಪಡೆದಿರುವ ಮೇಘಗಳಿಂದ ಧೂಳಿಯನ್ನಡಗಿಸು
ವುದು, ಕುಸುಮಗಳಿಂದ ಸಹಿತವಾದ ಮಳೆಯನ್ನು ಕರೆವುದು. ಈ
ಮೊದಲಾದ ಮಾರ್ಗಸಂಸ್ಕಾರಗಳನ್ನು ದೇವತೆಗಳು ಮುಂಚಿತವಾಗಿಯೇ
ಬೇಗನೆ ಅಣಿಮಾಡಿದರು. ಸ್ವಾರ್ಥಪರರು ಬಲು ಲವಲವಿಕೆಯುಳ್ಳವ
ರಲ್ಲವೆ ? ಪಿತ್ರಾಜ್ಞೆಯನ್ನು ಪಾಲಿಸಲು ಉದ್ಯುಕ್ತರಾಗಿ, ಚಾಪಧಾರಿಗ
ಳಾದ ಆ ಸೋದರರು - ತಂದೆಯ ಚರಣಗಳಲ್ಲಿ ಮಣಿದರು. ದೇಶಾಂತ
ರಕ್ಕೆ ತೆರಳಬೇಕೆಂದು ಬಯಸಿ, ಬಾಗಿದ ಕುವರರ ಶಿರಗಳಮೇಲೆ ಭೂಪ
ತಿಯ ಬಾಷ್ಪಬಿಂದುಗಳು ಉದಿರಿದುವು. ಆ ಅಣ್ಣತಮ್ಮಂದಿರ ಶಿಖಂ
ಡಕಗಳು - ತಂದೆಯ ಕಣ್ಣೀರಿನಿಂದ ತುಸ ನನದುವು. ಧನುರ್ಧರರಾಗಿ
ಮುನಿಯನ್ನು ಹಿಂಬಾಲಿಸಿ ನಡೆಯುತ್ತಿದ್ದರು, ದಾರಿಯುದ್ದಕ್ಕೂ ಇಕ್ಕೆ
ಲದಲ್ಲಿ ನಿಂತ ಪುರಜನರ ದೃಷ್ಟಿಗಳು - ತೋರಣಗಳಂತೆ ಬೆಳಗುತಲಿ
ದ್ದುವು. ಲಕ್ಷ್ಮಣನಿಂದ ಮಾತ್ರವೇ ಒಡಗೂಡಿರುವ ರಾಮನನ್ನು
ಸಂಗಡ ಕರೆದೊಯ್ಯಲು ಮುನಿಯು ಬಯಸಿದುದರಿಂದ ನೃಪತಿಯು -
ತನ್ನ ಮಕ್ಕಳ ಜತೆಯಲ್ಲಿ ಆಶೀರ್ವಾದವನ್ನು ಮಾತ್ರ ಕಳುಹಿದನಲ್ಲದೆ
ಸೇನೆಯನ್ನು ಕಳುಹಲಿಲ್ಲ. ಆತನ ಮಂಗಳಾಶಾಸನವೇ ಅವರನ್ನು
ಚೆನ್ನಾಗಿ ರಕ್ಷಿಸುವುದರಲ್ಲಿ ಸರಿಯಾದ ಬೆಂಬಲವಾಗಿದ್ದಿತು. ಮಾತೃ
ವರ್ಗದವರ ಚರಣಗಳಿಗಭಿವಂದಿಸಿ, ಮಹಾ ತೇಜಸ್ವಿಯಾದ ಮುನಿಯ
ಮಾರ್ಗವನ್ನು ಅನುಸರಿಸುತಲಿರುವ ರಾಮಲಕ್ಷ್ಮಣರು - ಮಹಾ ತೇಜ
ಸ್ಸುಳ್ಳ ರವಿಯ ಗಮನವಶದಿಂದ ಮೇಷಾದಿ ಸಂಕ್ರಮಣಗಳನ್ನನುಸರಿಸಿ
ಬರುವ ಚೈತ್ರ ವೈಶಾಖ ಮಾಸಗಳಂತೆ ಬೆಳಗುತಲಿದ್ದರು. ಬಾಲಭಾವ
ದಿಂದ ಅಡಿಗಳನ್ನಿಡುವ ಸಡಗರದಲ್ಲಿ, ಇಕ್ಕೆಲದ ತೋಳುಗಳನ್ನು ಅಲೆಗ
ಳಂತೆ ಅಲುಗಿಸುತ ಮುಂದರಿವ ಅವರ ನಡಿಗೆಯ ಬೆಡಗು - ಬಹು ಚಪ
ಲವಾಗಿದ್ದರೂ,ಮುಂಗಾರು ಮಳೆಯಲ್ಲಿ-ನೀರನ್ನುತಳ್ಳುವ,ದಡವನ್ನೊಡೆವ,

ಉದ್ಧ್ಯಭಿದ್ಯಗಳೆಂಬ ನದಗಳ ಹೆಸರುಗಳ ಹಾಗೆ, ಬಲು ಅಂದವಾಗಿದ್ದಿತು. ಅರಮನೆಯಲ್ಲಿ ಮಣಿಮಯವಾದ ನೆಲದಮೇಲೆ ಸುಖವಾಗಿ ಸಂಚರಿಸುತಲಿದ್ದ ಆ ಬಾಲಕರಿಗೆ ಕೌಶಿಕನು - ಬಲಾತಿಬಲಗಳೆಂಬ ಎರಡು ಮಂತ್ರಗಳನ್ನು ಉಪದೇಶಿಸಿದನು. ಕಲ್ಲುಮುಳ್ಳುಗಳ ದಾರಿಯಲ್ಲಿ ನಡೆಯುತಲಿದ್ದರೂ, ಬಿಸಿಲಿನ ಬೇಗೆಗೆ ಸಿಲುಕಿದ್ದರೂ, ಹೊತ್ತಿಗೆ ಸರಿಯಾಗಿ ಉಚಿತವಾದ ಆಹಾರವಿಲ್ಲದಿದ್ದರೂ ಆ ಮಂತ್ರಗಳ ಮಹಿಮೆಯಿಂದ ತಾಯಿಯ ಹತ್ತಿರದಲ್ಲಿರುವ ಹಸುಳೆಗಳಂತೆ, ಆ ತರಳರು ಬಳಲಲೇ ಇಲ್ಲ. ಇದಲ್ಲದೆ-ಬಹು ಹಳಬನೂ, ಪೂರ್ವಚರಿತ್ರೆಯನ್ನೆಲ್ಲ ಬಲ್ಲವನೂ, ತನ್ನ ತಂದೆಯ ಮಿತ್ರನೂ ಆಗಿರುವ ಆ ಮುನಿಯು ಹೇಳುವ ಹಳೆಯ ಕಥೆಗಳನ್ನು ಕೇಳುತ ಬಂದುದರಿಂದ, ಸೌಮಿತ್ರಿ ಸಹಿತನಾದ ರಾಘವನು - ಆನೆ ಕುದುರೆಗಳಮೇಲೆ ಕುಳಿತು ಪ್ರಯಾಣ ಮಾಡಿದವನಂತೆ ಕಾಲ್ನಡೆಯಿಂದ ಬಂದ ದಾರಿಯನ್ನು ಅರಿಯಲೇ ಇಲ್ಲ. ಮಧುರ ಜಲಗಳಿಂದ ಕೊಳಗಳೂ, ಕೇಳಲಿಂಪಾದ ದನಿಗಳಿಂದ ಹಕ್ಕಿಗಳೂ, ಗಮಗಮಿಸುವ ಹೂವಿನ ರಜಗಳಿಂದ ಗಾಳಿಗಳೂ, ಬಿಸಿಲಿನ ಝಳವಿಲ್ಲದಂತೆ ಜಲದಗಳೂ ಸಾನುಜನಾದ ದಾಶರಥಿಯನ್ನು ದಾರಿಯಲ್ಲಿ ಸೇವಿಸುತಲಿದ್ದುವು. ಮಾರ್ಗದೊಳಗೆ ಪುಣ್ಯಾಶ್ರಮಗಳಲ್ಲಿ ವಾಸಮಾಡುತಲಿದ್ದ ತಪಸ್ವಿಗಳು - ಅರಳಿದ ತಾವರೆಗಳಿಂದ ಕಂಗೊಳಿಸುವ ಸರೋವರಗಳನ್ನು ನೋಡುವುದಕ್ಕಿಂತಲೂ, ಬಳಲಿಕೆಯನ್ನು ಪರಿಹರಿಸುವ ಹಣ್ಣಿನ ಮರಗಳನ್ನು ಅವಲೋಕಿಸುವುದಕಿಂತಲೂ ಮಿಗಿಲೆನಿಸಿದ, ಆ ಬಾಲಕರ ಬಹು ಹಿತವಾದ ದರ್ಶನದಿಂದ ಆನಂದಿಸುತಲಿದ್ದರು. ಅಲ್ಲಿಂದ ಮುಂದೆ - ಉರಿಗಣ್ಣಿನಿಂದ ಬೆಂದುಹೋದ ಕಂದರ್ಪನ ತಪೋವನಕ್ಕೈತಂದು, ಬಿಲ್ಲನ್ನು ಹಿಡಿದಿರುವ ರಾಮನು-ಮೆಯ್ಯಸೊಬಗಿನಿಂದ ಮಾತ್ರವೇ ಎರಡನೆಯ ಮದನನಂತೆ ಬೆಳಗುತಲಿದ್ದನು ಆಗಲಲ್ಲಿ - ಹಿಂದೆ ಅಗಸ್ತ್ಯ ಮುನಿಯು - ಸುಕೇತುವೆಂಬ ಯಕ್ಷನ ಮಗಳಾದ ತಾಟಕೆಯು ಕೆಟ್ಟ ನಡತೆಯನ್ನು ಕಂಡು, ,, ನಿನಗೆ ಈ ಅಂದವಾದ ರೂಪವು ತೊಲಗಲಿ ಘೋರವಾದ ವಿಕಾರ ರೂಪವನ್ನು ತಾಳಿ, ಮಾನುಷ ಮಾಂಸಾಹಾರಿಯಾಗಿ ಸಂಚರಿಸು,, ಎಂದು ಅವಳನ್ನು ಶಪಿಸಿದನು. ಅವಳೀವನವನ್ನೆಲ್ಲ ಹಾಳುಮಾಡುತಲಿದಾಳೆ ಎಂದು

ಮುನಿಯಿಂದ ಸುಕೇತು ಪುತ್ರಿಯ ಪೂರ್ವ ವೃತ್ತಾಂತವನ್ನು ಕೇಳಿದ ಬಳಿಕ, ಆ ತರುಣರೀರ್ವರೂ - ಬಿಲ್ಲಿನ ತುದಿಗಳನ್ನು ನೆಲದಮೇಲಿಟ್ಟು ಮೋಡಿಯಿಂದ ಹೆದೆಯನ್ನೇರಿಸಿ ಟಂಕಾರಗೈಸಿದರು. ಮೌರ್ವಿಯ ಶಬ್ದವು ಕೇಳಬಂದಿತು. ಕೂಡಲೆ ಕೃಷ್ಣಪಕ್ಷದ ರಾತ್ರಿಯಂತೆ ಕಾಣ ಬರುವ ತಾಡಕೆಯು - ಚಲಿಸುತಲಿರುವ ಕಪೋಲಕುಂಡಲಗಳುಳ್ಳವಳಾಗಿ, ಆ ರಾಮಲಕ್ಷ್ಮಣರ ಇದಿರಿಗೆ ಬಂದು ನಿಂತಳು. ಬತ್ತಾದ ಕೊಕ್ಕರೆಗಳ ಸಾಲುಗಳನ್ನೊಳಗೊಂಡಿರುವ ಮೋಡಗಳ ಸಾಲಿನಂತೆ ಕಾಣಬರುತ್ತಿದ್ದಳು. ಅವಳು ಬರುವ ತೀವ್ರವಾದ ವೇಗದಲ್ಲಿ ಮರಗಳು ಬುಡದಿಂದ ತುದಿಯುವರೆಗೂ ಚಲಿಸುತಲಿದ್ದುವು. ಹೆಣಗಳ ಮೇಲಣ ಬಟ್ಟೆಗಳನ್ನು ಅಳವಟ್ಟಿದ್ದಳು. ಸಿಂಹ ಗರ್ಜನೆಯಿಂದ ಬಹು ಕ್ರೂರಳಾಗಿದ್ದಳು. ಸುಡುಗಾಡಿನಲ್ಲಿ ಬೀಸುವ ಬಿರುಗಾಳಿಯಿಂದ ಹೇಗೋಹಾಗೆ, ರಾಮನಾರಕ್ಕಸಿಯಿಂದ ತುಸ ಹಿಮ್ಮೆಟ್ಟಿದನು. ಬಾಹುದಂಡವನ್ನೆತ್ತಿ ಅಬ್ಬರದಿಂದ ತಾಡಕೆಯು ಹತ್ತಿರಕ್ಕೆ ಬಂದಳು, ಅವಳ ಟೊಂಕದಲ್ಲಿ ಸುತ್ತಿರುವ ಮನುಷ್ಯರ ಕರುಳುಗಳು ಜೋಲಾಡುತಲಿದ್ದುವು. ರಾಮನವಳನ್ನು ಕಂಡನು, ‟ಕೊಲ್ಲಲಿಕ್ಕೆ ಬಂದವರನ್ನು ಕೊಲ್ಲಲೇಬೇಕು, ಅಂತಹ ಆತತಾಯಿಯನ್ನು ಕೊಲ್ಲುವವನಿಗೆ ದೋಷವಿಲ್ಲ,, ಎಂಬ ಮನುವಚನವನ್ನು ಬಲ್ಲನು, ಅದರಿಂದಲೇ ಹೆಂಗಸರನ್ನು ಕೊಲ್ಲಬೇಕೆಂಬ ಜುಗುಪ್ಸೆಯನ್ನೂ, ಕರುಣೆಯನ್ನೂ ಶರದೊಂದಿಗೆ ಬಿಟ್ಟನು. ರಾಮಸಾಯಕವು - ಕಲ್ಲಿನಂತೆ ಘನವಾಗಿದ್ದ ರಕ್ಕಸಿಯ ಎದೆಯಲ್ಲಿ ಬಿಲವನ್ನು ಮಾಡಿಕೊಂಡು ಹೊರಟೇಹೋಯಿತು. ಅದುವರೆಗೂ ರಕ್ಕಸರ ಪಡೆಯು ದೇಶದೊಳಕ್ಕೆ ಹೋಗದಿದ್ದ ಮೃತ್ಯುವಿಗೆ ಆ ಬಿಲವೇ ದ್ವಾರವಾಯಿತು ಬಾಣದ ಪೆಟ್ಟಿನಿಂದ ಎದೆಯೊಡೆದು ಕೆಳಗೆಬಿದ್ದ ರಕ್ಕಸಿಯು - ನೆಲವನ್ನು ಮಾತ್ರವೆ ನಡುಗಿಸಲಿಲ್ಲ, ಮೂಲೋಕವನ್ನೂ ಗೆದ್ದು, ಚಲಿಸದೆ ನೆಲೆಗೊಂಡಿದ್ದ ರಾವಣ ರಾಜ್ಯಲಕ್ಷ್ಮಿಯನ್ನೂ ಕಂಪಿಸುವಂತೆಸಗಿದಳು. ರಾಮನೆಂಬ ಮನ್ಮಥನ ಅಂಬಿನ ಪೆಟ್ಟು ನಿಶಾಚರಿಯ ಎದೆಗೆ ಬಡಿಯಿತು. ತಾಳಲಾರದೆ ಹೋದಳು. ವಾಸನೆಯುಳ್ಳ ರಕ್ತಚಂದನದ ಲೇಪನವನ್ನು ಪಡೆದಳು. ಜೀವಿತೇಶನ ವಸತಿಯನ್ನು ಕುರಿತು ತೆರಳಿದಳು. ಬಳಿಕ ತನ್ನ

ಪರಾಕ್ರಮದಿಂದ ಸಂತುಷ್ಟನಾದ ಮುನಿಯಿಂದ ತಾಟಕಾರಿಯು-ಭಾಸ್ಕರನಿಂದ ಕಾಷ್ಠವನ್ನು ಸುಡುವ ತೇಜವನ್ನು ಸೂರ್ಯಕಾಂತ ಶಿಲೆಯು ಹಾಗೆ, ದೈತ್ಯರನ್ನು ಧ್ವಂಸಮಾಡುವ ಅಸ್ತ್ರವಿದ್ಯೆಯನ್ನು ಮಂತ್ರಸಹಿತವಾಗಿ ಕಲಿತನು. ಅಲ್ಲಿಂದ ಮುಂದೆ-ತಪಸ್ವಿಯಿಂದ ಅಲ್ಲಲ್ಲಿನ ಕಥೆಗಳನ್ನು ಕೇಳುತ್ತಾ, ಪಾವನವೆನಿಸಿದ ವಾಮನಾಶ್ರಮ ಪದವನ್ನು ಹೊಕ್ಕನು. ಆಗ ರಾಘವನು - ತನ್ನ ಪೂರ್ವಾವತಾರದ ನಡತೆಗಳನ್ನೆಲ್ಲ ನೆನೆಯಲಾರದೆ ಹೋದರೂ, ಮನದೊಳೊಂದುಬಗೆಯ ತವಕವನ್ನು ಹೊಂದಿದನು.

ತರುವಾಯ ಮುನಿಯ ತಪೋವನವು ಕಾಣಬಂದಿತು. ಶಿಷ್ಯವರ್ಗದವರು ಅತಿಥಿಗಳ ಸತ್ಕಾರಕ್ಕೆ ತಕ್ಕ ಸಾಮಗ್ರಿಗಳನ್ನು ಅಣಿಮಾಡುತ್ತಿದ್ದರು. ತರುಗಳೆಲ್ಲ ತಳಿರುಗಳೆಂಬ ಅಂಜಲಿಗಳನ್ನುಳ್ಳುವಾಗಿದ್ದುವು. ಮೃಗಗಳೆಲ್ಲ ನಿರ್ಭಯಗಳಾಗಿ ತಲೆಯನ್ನೆತ್ತಿ ಮುನಿಯ ಆಗಮನವನ್ನು ನಿರುಕಿಸುತಲಿದ್ದುವು. ಇಂತಪ್ಪ ಪುಣ್ಯಾಶ್ರಮವನ್ನುಎಲ್ಲರೂ ಹೊಕ್ಕರು. ತಪೋನಿಧಿಯು ಯಜ್ಞದೀಕ್ಷೆಯನ್ನು ಕೈಗೊಂಡನು. ದಶರಥಾತ್ಮಜರು - ಯಾಗವನ್ನು ಯಾವುದೊಂದು ಅಡ್ಡಿವಿಡ್ಡಾರಕಗ್ಳೂ ಎಡೆಯಾಗದಂತೆ ಶರಗಳಿಂದ ರಕ್ಷಿಸತೊಡಗಿದರು. ಕಗ್ಗತ್ತಲಿನ ಕೋಟಲೆಗೀಡಾಗದಂತೆ ಕಿರಣಗಳಿಂದ ರಕ್ಷಿಸಲು ಕ್ರಮವಾಗಿ ಉದಿಸುವ ಸೂರ್ಯಚಂದ್ರರಂತೆ ಕಂಗೊಳಿಸುತಲಿದ್ದರು. ಬಂಧೂಕ ಕುಸುಮಗಳಂತೆ ತೋರವಾದ ಕೆನ್ನೀರಿನ ಹನಿಗಳಿಂದ ಯಜ್ಞವೇದಿಯು ನನೆಯುತ ಬಂದಿತು, ಋತ್ವಿಕ್ಕುಗಳು ಕಂಡರು, ಅಂಜಿದರು, ನಡೆಸುತಲಿದ್ದ ಕರ್ಮಗಳನ್ನು ಕೈಬಿಟ್ಟರು, ಕೈಗಳಲ್ಲಿದ್ದ ಸ್ರುಕ್ಸ್ರುಚಗಳೆಂಬ ಪಾತ್ರಗಳು ಸಡಲಿ ಕೆಳಗೆ ಬಿದ್ದುವು, ಇನ್ನೇನು ಯಜ್ಞವಿಧಿಯು ಕೊನೆಗಾಣುವ ಸಮಯವು ಬಂದಿತು, ಲಕ್ಷ್ಮಣಾಗ್ರಜನು - ತತ್‌ಕ್ಷಣದಲ್ಲಿ ಬತ್ತಳಿಕೆಯ ಮುಖದಿಂದ ಬಾಣವನ್ನು ಹಿರಿಯುತ ಮೇಲ್ಮುಖನಾಗಿ ನೋಡಿದನು, ರಕ್ಕಸರ ಪಡೆಯನ್ನು ಆಗಸದಲ್ಲಿ ಕಂಡನು, ಹದ್ದುಗಳ ಹಿಂಡು ಧ್ವಜಪಟಗಳ ಮೇಲೆ ದಟ್ಟವಾಗಿ ಹಾರಾಡುತಲಿದ್ದಿತು. ರಾಮನಾಗಲೆ ಬಾಣವನ್ನು ತೊಟ್ಟನು, ಯಾಗವನ್ನು ದ್ವೇಷಿಸುವ ಆ ರಾಕ್ಷಸರೊಳಗೆ ಮುಂದಾಳುಗಳಾಗಿರುವ ಮಾರೀಚ ಸುಬಾಹುಗಳೆಂಬಿಬ್ಬರನ್ನು ಮಾತ್ರವೇ

ಗುರಿಯಿಟ್ಟನು. ಮಹಾಸರ್ಪವನ್ನು ಹಿಡಿದಪ್ಪಳಿಸಿ, ವಿಕ್ರಮವನ್ನು ತೋರುವ ಗರುಡನು - ನೀರು ಹಾವುಗಳಲ್ಲಿ ಪ್ರವರ್ತಿಸುವುದುಂಟೆ ? ಅಸ್ತ್ರವಿದ್ಯಾ ಪಾರಂಗತನಾದ ರಾಮನು - ಅಂಬಿನಲ್ಲಿ ತೀವ್ರವಾದ ವಾಯುದೇವತೆಯನ್ನು ಅಭಿಮಂತ್ರಿಸಿ ಇಟ್ಟನು. ದೊಡ್ಡಬೆಟ್ಟದಂತೆ ಬಲು ತೋರವಾಗಿಯೂ ಭಾರವಾಗಿಯೂ ಇರುವ ಆ ರಕ್ಕಸರನ್ನು ಬಿರುಗಾಳಿಯು ಹಣ್ಣೆಲೆಯನ್ನು ಹೇಗೋಹಾಗೆ, ನಿಮಿಷಮಾತ್ರದಲ್ಲಿ ಹಾರಿಸಿದನು. ಆ ಮಾರೀಚನ ಸಂಗಡ ಮಾಯೆಯಿಂದ ಅಲ್ಲಲ್ಲಿ ಓಡಾಡುತಲಿದ್ದ ಸುಬಾಹುವೆಂಬಸುರನನ್ನು ಕಂಡನು. ಕುಶಲನಾದ ಕಾಕುತ್ಸ್ಥನು - ಕಣೆಗಳಿಂದ ಆ ರಕ್ಕಸನನ್ನು ತುಂಡುತುಂಡಾಗಿ ಕತ್ತರಿಸಿ, ಆಶ್ರಮದ ಹೊರಗಿರುವ ಹಕ್ಕಿಗಳಿಗೆ ಹಂಚಿಕೊಟ್ಟನು.

ಬಳಿಕ ಯಾಜ್ಞಿಕರು - ಸಂಯುಗದಲ್ಲಿನ ರಾಘವರ ವಿಕ್ರಮವನ್ನು ಕೊಂಡಾಡಿದರು, ಯಜ್ಞವಿಘ್ನವು ತೊಲಗಲು ಹರ್ಷಿತರಾದರು, ಮೌನದಿಂದಿರುವ ಕುಲಪತಿಯಾದ ಮುನಿಯು ಅಧ್ವರ ಕ್ರಿಯೆಗಳನ್ನು ಕ್ರಮವಾಗಿ ನೆರವೇರಿಸಿದರು. ದೀಕ್ಷೆಯು ನಿರಂತರಾಯವಾಗಿ ಈಡೇರಿ, ಅವಭೃಥಸ್ನಾನವನ್ನು ಮಾಡಿದ ಕೂಡಲೆ, ಚಲಿಸುತಲಿರುವ ಕಾಕಪಕ್ಷಗಳನ್ನೊಳಗೊಂಡಿರುವ ಶಿರಗಳಿಂದ ಬಾಗಿದ ರಾಮಲಕ್ಷ್ಮಣರನ್ನು ಮುನಿಯು ಹರ್ಷದಿಂದ ಹರಸುತ, ದರ್ಭೆಯನ್ನು ಹಿಡಿದು ಗಾಯವಾಗಿದ್ದ ಕರತಲದಿಂದ ತಡವಿದನು.

ಅದುವರೆಗೆ ಮಿಥಿಲಾ ನಗರದಲ್ಲಿ ಜನಕ ಮಹಾರಾಜನು - ಕ್ರತುವನ್ನಾಚರಿಸಬೇಕೆಂದು ಸಂಭಾರವನ್ನೆಲ್ಲ ಸಿದ್ಧಪಡಿಸಿಕೊಂಡಿದ್ದನು, ವಿಶ್ವಾಮಿತ್ರನನ್ನು ಕರೆಯಕಳುಹಿದನು. ರಾಮಲಕ್ಷ್ಮಣರು - ಮಿಥಿಲಾಧಿಪನ ಬಳಿಯಲ್ಲಿ ಬಲವಾದ ಬಿಲ್ಲೊಂದಿರುವುದೆಂದು ಕರ್ಣಾಕರ್ಣಿಕೆಯಿಂದ ಕೇಳಿದ್ದರು. ಅವರ ಮನದ ಬಯಕೆಯನ್ನು ತೀರಿಸಲು - ತಪಸ್ವಿಯು ಸಂಗಡಲೇ ಅವರನ್ನೂ ಕರೆದುಕೊಂಡು ಹೊರಟನು.

ಪಯಣದಮೇಲೆ ಪಯಣವನ್ನು ಬೆಳಸುತ ದಾರಿಯನ್ನು ನಡೆದು, ಒಂದು ರಾತ್ರಿ - ಒಂದಾನೊಂದು ರಮ್ಯವಾದ ತರುಮೂಲದಲ್ಲಿ ಟಂಕಿಯನ್ನು ಮಾಡಿದರು, ದೀರ್ಘತಪನಾದ ಗೌತಮ ಮುನಿಯು ಕಳತ್ರವು

ಇಂದ್ರನಿಗೆ ಕ್ಷಣಕಾಲಮಾತ್ರ ಕಳತ್ರವೆನಿಸಿ, ಪತಿಯ ಸಿಟ್ಟಿನ ಬಿರುನುಡಿಯಿಂದ ಶಿಲೆಯಾಗಿ, ಅದೃಶ್ಯವೆನಿಸಿ ಬಿದ್ದಿದ್ದುದು ಅಲ್ಲಿಯೆ. ಬಹುಕಾಲಕ್ಕೆ ಶಿಲಾಮಯವಾಗಿದ್ದ ತನ್ನ ರೂಪವನ್ನು ತೊರೆದು, ಬಲು ಅಂದವಾದ ಪೂರ್ವರೂಪವನ್ನು ಮುನಿವಧುವು ಪಡೆದುದು, ಪಾಪಪರಿಹಾರಕವಾದ ರಾಮಪದರಜದ ಅನುಗ್ರಹವೇ.

ಅರ್ಥಕಾಮಗಳೊಡನೆ ದೇಹವನ್ನಾಂತ ಧರ್ಮವೆಂಬಂತೆ, ರಾಘವರಿಂದ ಸಹಿತನಾಗಿ ಮುನಿಯು ಬಂದಿರುವ ಸುದ್ದಿಯನ್ನು ಕೇಳಿ, ಜನಕ ಜನೇಶ್ವರನು - ಉಚಿತಸತ್ಕಾರದಿಂದ ಇದಿರ್ಗೊಂಡನು. ಬಾಂದಳದಿಂದ ಇಳಿದ್ಗೈತಂದ ಪುನರ್ವಸೂ ನಕ್ಷತ್ರಗಳಂತೆ ಕಂಗೊಳಿಸುವ ಗುಣಾಭಿರಾಮರಾದ ರಾಮಲಕ್ಷ್ಮಣರನ್ನು ಅತ್ಯಾದರಗೊಂಡು, ದೃಷ್ಟಿಗಳಿಂದ ಪಾನಮಾಡುತಲಿರುವ ಮಿಥಿಲಾನಗರ ನಿವಾಸಿಗಳ ಮನವು - ರೆಪ್ಪೆಗಳನ್ನು, ನೋಟಕ್ಕೆ ಅಡ್ಡಿಮಾಡುವ ವಂಚಕಗಳನ್ನಾಗಿ ತಿಳಿಯುತಲಿದ್ದಿತು.

ಕ್ರತುಕ್ರಿಯಾವಿಧಿಯು ಕ್ರಮವಾಗಿ ಪೂರಯಿಸಿತು, ಕುಶಿಕವಂಶಪ್ರದೀಪನಾದ ಮುನಿಯು - ಕಾಲವಿದನಾದುದರಿಂದ, ಬಾಣಾಸನವನ್ನು ನೋಡಬೇಕೆಂದು ರಾಮನು ಕುತೂಹಲಪಡುತಲಿರುವುದನ್ನು ಮೈಥಿಲನಿಗರುಹಿದನು. ವೈದೇಹನಾದರೆ - ಲೋಕಪ್ರಸಿದ್ಧವಾದ ರವಿವಂಶದಲ್ಲಿ ರಾಘವನ ಉತ್ಪತ್ತಿಯೆಂಬುದನ್ನು ಕೇಳಿದನು, ಬಲು ಕೋಮಲವಾದ ರಾಮನಾಕಾರವನ್ನು ಕಣ್ಣಾರ ನೋಡಿದನು, ಹಸುಳೆಗಳಿಂದ ಹಿಡಿದೆತ್ತಿ ಬಾಗಿಸಲಳವಲ್ಲದ ತನ್ನ ಬಿಲ್ಲನ್ನು ನೆನೆದನು, ವರನು ಮಗಳಿಗೆ ಕೊಡಬೇಕಾಗಿರುವ ಧನುರ್ಭಂಗ ರೂಪವಾದ ಆ ಮೂಲ್ಯವನ್ನು ದುರ್ಘಟವಾದುದನ್ನಾಗಿ ಭಾವಿಸಿದನು, ಪ್ರತಿಜ್ಞೆಯು ಪ್ರಬಲವಾದುದೆಂದು ಚಿಂತಿಸಿದನು, ಸಲುವಳಿಯಾದ ಸಂಬಂಧವು ಸಮನಿಸದೆ ಹೋಗುವುದೆಂಬ ಸಂಕಟದಿಂದ ಕಳವಳಿಸಿದನು. ವಿಶ್ವಾಮಿತ್ರನನ್ನು ಕುರಿತು ಇಂತೆಂದನು —

ಎಲೈ ಮುನಿವರ್ಯನೇ ! ಪ್ರಬಲವಾದ ಮದದಾನೆಗಳಿಂದಲೂ ಮಾಡಿ ಮುಗಿಸಲಳವಲ್ಲದ ಮಹಾಕಾರ್ಯವನ್ನು ಮಾಡಲೆಳಸುವ ಎಳೆಯ

ಆನೆಯು ಮುರಿಯು ಉದ್ಯೋಗವನ್ನು ನಾನು ಸಹಿಸಲಾರೆನು. ಅದು ಏಕೆ ಎಂಬೆಯೋ ? ನಾನು ಏನ ಹೇಳಲಿ ! ಬಿಲ್ಲಾಳುಗಳೊಳಗೆ ಬಲು ಗಟ್ಟಿಗರೆನಿಸಿದ ಬಹುಮಂದಿ ವೀರಭೂಪಾಲರು - ಈ ಬಿಲ್ಲನ್ನೆತ್ತಿ ಬಾಗಿ ಸಲಾರದೆ ನಾಚಿಕೆಗೊಂಡರು, ಮತ್ತು - ಅನೇಕವೇಳೆ ಶರಾಸನಗಳಲ್ಲಿ ಹೆದೆಯನ್ನೇರಿಸಿದ ಅಭ್ಯಾಸದಿಂದ ಜಡ್ಡುಗಟ್ಟಿರುವ ಹೇರಳವಾದ ತಮ್ಮ ತೋಳುಬಲವನ್ನು ಛೀ ಎಂದು ಬಲವಾಗಿ ಹೀಯಾಳಿಸಿಕೊಂಡು ಹೊರ ಟುಹೋಗಿದಾರೆ ಎಂದನು.

ಮುನಿಯು ಮಹಾರಾಜನಿಗಿಂತು ಮಾರುತ್ತರವನ್ನಿತ್ತನು — ಎಲೈ ಅರಸೇ ! ರಾಮನ ಬಾಹುಬಲದ ಪರಿಯನ್ನು ಲಾಲಿಸು, ಅಥವಾ ಬರಿಯ ಮಾತನಾಡಿ ಫಲವೇನು? ಗಿರಿಯಲ್ಲೆರಗಿದ ಸಿಡಿಲಿನಂತೆ, ಬಿಲ್ಲನ್ನು ಮುರಿದ ಬಳಿಕಲೇ ರಾಮನ ಶಕ್ತಿಯು ನಿನಗೆ ವ್ಯಕ್ತವಾಗುವುದು, ಎಂದೆನಲು, ಜ್ಞಾನನಿಧಿಯಾದ ಮುನಿಯ ಮಾತನ್ನು ಕೇಳಿದ ಜನಕನು - ಇಂದ್ರಗೋಪವೆಂಬ ಸಣ್ಣ ಹುಳದಷ್ಟಿರುವ ಬೆಂಕಿಯ ಕಿಡಿಯಲ್ಲಿಯೂ ಮಹಾದಾಹಶಕ್ತಿಯಿರುವಂತೆ, ಕಾಕಪಕ್ಷಧರನಾದ ರಾಮನಲ್ಲಿಯೂ ಅಂತಪ್ಪ ಅಪಾರವಾದ ಶಕ್ತಿಯಿರಬಹುದೆಂದು ನಂಬಿದನು. ಮತ್ತು - ಸಾಸಿರಗಣ್ಣನು - ತನ್ನ ತೇಜೋಮಯವಾದ ಚಾಪವನ್ನು ತೋರ್ಪಡಿ ಸಲು ತೋಯದಗಳಿಗಾಜ್ಞಾಪಿಸುವಂತೆ, ಕಾರ್ಮ್ಮುಕವನ್ನು ತರಲು, ತನ್ನ ಪಕ್ಕದಲ್ಲಿದ್ದ ಸಾವಿರಾರುಮಂದಿ ಪರಿಜನರಿಗಾಣತಿಯನ್ನಿತ್ತನು. ಸೇವ ಕರಾಗಲೆ ಬಾಣಾಸನವನ್ನು ಬಹು ಪ್ರಯಾಸದಿಂದ ತಂದಿಳುಹಿದರು. ದಾಶರಥಿಯು - ಮಲಗಿರುವ ಆದಿಶೇಷನಂತೆ ಬಹು ಭೀಷಣವೆನಿಸಿರುವ ಆ ಶರಾಸನವನ್ನವಲೋಕಿಸಿದನು, ಹಾಗೆಯೇ ಕೈಯಿಂದ ಹಿಡಿದೆತ್ತಿ ದನು. ಪೂರ್ವದಲ್ಲಿ ಪರಮೇಶ್ವರನು - ಮೃಗರೂಪವನ್ನಾಂತು ಓಡುತ ಲಿದ್ದ ಕ್ರತುವಿನಮೇಲೆ ಈ ಬಿಲ್ಲಿನಿಂದಲೇ ಬಾಣವನ್ನೆಸೆದುದು.

ಸಭಾಜನರೆಲ್ಲ ಸ್ತಬ್ಧರಾಗಿ ರೆಪ್ಪೆಬಡಿಯದೆ ವಿಸ್ಮಯದಿಂದ ನೋ ಡುತಲಿದ್ದರು, ಕೋಮಲವಾದ ಕುಸುಮಚಾಪವನ್ನು ಕಾಮನಂತೆ, ರಾಮನೂ ವಿಶೇಷ ಪ್ರಯತ್ನವಿಲ್ಲದೆಯೇ ಶೈಲಸಾರದ ಆ ಬಿಲ್ಲಿನಲ್ಲಿ ನಿಮಿಷ ಮಾತ್ರದೊಳಗೆ ಹೆದೆಯನ್ನೇರಿಸತೊಡಗಿದನು. ರಾಮನ ಹೇರಳವಾದ

ಸೆಳೆತದಿಂದ ಮುರಿದ ಕಾರ್ಮುಕದಿಂದ ಬರಸಿಡಿಲಿನಂತೆ ಹೊರಟ ಬಹು ಘೋರವಾದ ಆರವವು - ಪಡುವಣ ಕಡಲ ತಡಿಯೊಳಿದ್ದ ಬಲು ಸಿಟ್ಟುಗಾರನಾದ ಭಾರ್ಗವನಿಗೆ, ಮಲಿನವಾಗಿದ್ದ ಕ್ಷತ್ರಕುಲವು ಮರಳಿ ತಲೆಯನ್ನೆತ್ತಿದುದು ಎಂದು ಅರುಹುವಂತಿದ್ದಿತು.

ಅಹಹ ! ಆ ಬಳಿಕ ಮೈಥಿಲನು - ರುದ್ರಕಾರ್ಮುಕದಲ್ಲಿ ರಾಘವನ ವೀರ್ಯವನ್ನು ಸಾರವತ್ತಾದುದನ್ನಾಗಿ ಅವಲೋಕಿಸಿದನು, ಬಹುವಾಗಿ ಅಭಿನಂದಿಸಿದನು; ರೂಪವತಿಯಾಗಿ ಬಂದ ಲಕ್ಷ್ಮಿಯಂತಿರುವ ಅಯೋನಿಜೆಯಾದ ತನ್ನ ಆತ್ಮಜೆಯನ್ನು ಇದೇ ನಿನ್ನ ವೀರ್ಯಶುಲ್ಕವೆಂದು ದಾಶರಥಿಗೆ ವಚನದಿಂದ ಒಪ್ಪಿಸಿದನು. ಮತ್ತು - ಸತ್ಯಸಂಗರನಾದುದರಿಂದಲೇ, ತೇಜಸ್ವಿಯೂ, ತಪೋನಿಧಿಯೂ ಆಗಿರುವ ಮುನಿಯ ಸನ್ನಿಧಾನದಲ್ಲಿ, ಆ ಕೂಡಲೇ ಅಗ್ನಿಸಾಕ್ಷಿಕನಾಗಿ ಅವನಿಜೆಯನ್ನು ಆ ರಾಘವನಿಗೆ ದಾನವಾಗಿ ಕೊಟ್ಟನು.

ತರುವಾಯ ಮಹಾತೇಜಸ್ವಿಯಾದ ಜನಕನು—" ಎಲೈ ಮಹಾರಾಜನೆ ! ನನ್ನ ಮಗಳಾದ ಈ ಸೀತೆಯನ್ನು ನಿನ್ನ ಸೊಸೆಯನ್ನಾಗಿ ಸ್ವೀಕರಿಸು, ಆಳುತನದಲ್ಲಿರುವ ಈ ನಿಮಿಕುಲವನ್ನು ಗೌರವಿಸು " ಎಂದು ಅರಿಕೆ ಮಾಡುವಂತೆ, ದಶರಥನಬಳಿಗೆ ಪೂಜ್ಯನಾದ ಪುರೋಹಿತನನ್ನು ತಡಮಾಡದೆ ಕಳುಹಿಸಿಕೊಟ್ಟನು. ದಶರಥನೂ - ರಾಮನಿಗೆ ಮದುವೆ ಮಾಡಬೇಕೆಂದು ಸರಿಯಾದ ಸಂಬಂಧವನ್ನು ಬೆಳೆಸಲು ಯಾರ ಮನೆತನದಲ್ಲಿ ಒಳ್ಳೆಯ ಹೆಣ್ಣಿದೆ ? ಎಂದು ಚಿಂತಿಸುತಲೇ ಇದ್ದನು. ಅದುವರೆಗೆ ಸರಿಯಾಗಿ ಅನುಕೂಲವಾದ ಮಾತನ್ನು ಹೇಳತಕ್ಕ ಜನಕ ಪುರೋಹಿತನೂ ಒಂದು ಸುದ್ದಿಯನ್ನು ತಿಳಿಸಿದನು. ' ಕಲ್ಪವೃಕ್ಷ ಫಲದಂತೆ , ಪುಣ್ಯವಂತರ ಕೋರಿಕೆಯು ತತ್‌ಕ್ಷಣದಲ್ಲಿಯೇ ಫಲಿಸುವುದು, ಎಂಬುದು ಸಹಜವಾಗಿದೆ. ದೇವೇಂದ್ರ ಮಿತ್ರನೆನಿಸಿ, ಜಿತೇಂದ್ರಿಯನ್ನಾಗಿರುವ ಕೋಸಲನಾಥನು - ಮಿಥಿಲೆಯಿಂದ ಬಂದ ಬ್ರಾಹ್ಮಣನನ್ನು ಉಚಿತವಾದ ಸತ್ಕಾರಗಳಿಂದ ಗೌರವಿಸಿ, ಆತನಿಂದ ಶುಭಸಮಾಚಾರವನ್ನೆಲ್ಲ ಕ್ರಮವಾಗಿ ಕೇಳಿ ತಿಳಿದನು. ಹರ್ಷಿತನಾದನು. ಕೂಡಲೆ ಸಕಲ ಸಲಕರಣೆಗಳಿಂದೊಡಗೂಡಿ,ಸೇನೆಯೊಂದಿಗೆ ಹೊರಟನು. ಪಡೆಯಿಂದೆದ್ದ

ಧೂಳಿಯು ರವಿಮಂಡಲವನ್ನು ಮುಚ್ಚುತಲಿದ್ದಿತು. ತ್ವರೆಯಾದ ಪ್ರಯಾಣಕಗಳಿಂದ ಮಿಥಿಲಾನಗರದಬಳಿಗೆ ಬಂದು ಸೇರಿದನು, ಊರ ಹತ್ತಿರದಲ್ಲಿರುವ ಮರಗಿಡಬಳ್ಳಿಗಳಿಂದ ತುಂಬಿದ ಉದ್ಯಾನವನ್ನೆಲ್ಲ ತುಳಿಯುತಲಿದ್ದ ಪಡೆಯ ಹಾವಳಿಯನ್ನು ಪ್ರೀತಿವಿಶೇಷದಿಂದ ಆ ನಗರಿಯು ಸಹಿಸಿತು, ಗರತಿಯಾದ ಸುದತಿಯು ಪ್ರೇಮವಲ್ಲಭನ ಅತಿಕ್ರಮವನ್ನು ತಾಳುವಂತೆ ಕಂಗೊಳಿಸಿತು.

ವರುಣವಾಸವರಿಗೆಣೆಯೆನಿಸಿರುವ ವಸುಮತೀಶರೀರ್ವರೂ ಕಲೆತರು, ಇಬ್ಬರೂ ಸದಾಚಾರಸಂಪನ್ನರು, ಕನ್ಯಾಕುಮಾರರ ಕರಗ್ರಹಣ ಮಂಗಳೋತ್ಸವವನ್ನು ತಂತಮ್ಮ ವಿಭವ ಪ್ರಭಾವಗಳಿಗನುಸಾರವಾಗಿ ಹರಡಿ ಈಡೇರಿಸಿದರು. ರಘುನಾಥನು - ವೈಥಿಲಿಯನ್ನೂ, ಬಳಿಕ ಸೌಮಿತ್ರಿಯು - ಸೀತಾನುಜೆಯಾಗಿ ವೈದೇಹನ ಔರಸ ಕನ್ಯೆಯಾಗಿದ್ದ ಊರ್ಮಿಳೆಯನ್ನೂ, ರಾಮಲಕ್ಷ್ಮಣರ ಅನುಜರಾದ ಭರತ ಶತ್ರುಘ್ನರು-ಜನಕ ಸೋದರನಾದ ಕುಶಧ್ವಜನ ತನುಜೆಯರಾಗಿರುವ ಮಾಂಡವೀ ಶ್ರುತಕೀರ್ತಿಯರನ್ನೂ, ಕ್ರಮವಾಗಿ ಮದುವೆಯಾದರು. ನವವಧುಗಳನ್ನುಪರಿಗ್ರಹಿಸಿದ ರಾಮಾದಿ ನಾಲ್ಕುಮಂದಿ ಕುಮಾರರರೂ, ದಶರಥಭೂಪಾಲನ ಫಲಸಿದ್ಧಿಗಳಿಂದೊಡಗೂಡಿದ ಸಾಮದಾನ ಭೇದದಂಡೋಪಾಯಗಳಂತೆ ಕಂಗೊಳಿಸುತಲಿದ್ದರು ಮತ್ತು-ಆ ರಾಜಕನ್ಯಾವರರು - ಕುಲ, ಶೀಲ, ವಯ, ರೂಪ, ಗುಣ, ಲಾವಣ್ಯ ಈ ಮೊದಲಾದವುಗಳ ಅನುರೂಪ್ಯದಿಂದ ಪರಸ್ಪರವಾಗಿ ಸಫಲತೆಯನ್ನು ಪಡೆದರು. ಆಗ-ಆ ವಧೂವರರ ಸಮಾಗಮವು - ಪ್ರಕೃತಿ ಪ್ರತ್ಯಯಗಳ ಸಂಬಂಧದಂತೆ ಸಂಶೋಭಿಸುತಲಿದ್ದಿತು.

ಈ ಪ್ರಕಾರವಾಗಿ ಕೋಸಲ ನಾಥನು - ತನ್ನ ನಾಲ್ಕುಮಂದಿ ಮಕ್ಕಳಿಗೂ ಮಿಥಿಲಾ ನಗರದಲ್ಲಿ ವಿವಾಹ ಮಂಗಳಮಹೋತ್ಸವವನ್ನು ಬಹು ಪ್ರೀತಿಯಿಂದ ನೆರವೇರಿಸಿದನು. ಬಳಿಕ ಸುಖಪ್ರಯಾಣವನ್ನು ಬೆಳಸಿದನು. ಪ್ರೀತ್ಯುತ್ಸಾಹಗಳಿಂದ ಹಿಂಬಾಲಿಸಿ ಬಂದ ಜನಕರಾಯನನ್ನು ತನ್ನ ರಾಜಧಾನಿಗೆ ಮೂರು ವಸತಿಗಳು ಮಾತ್ರವಿರುವಲ್ಲಿ ಹಿಂದಕ್ಕೆ ಕಳುಹಿಸಿ, ತಾನು ಮುಂದರಿದನು.

ಹೀಗೆ ಸಕಲ ಪರಿವಾರದಿಂದ ಪರಿವೃತನಾಗಿ ಬರುತ್ತಿರುವಲ್ಲಿ ಒಂದುವೇಳೆ - ಪಡೆಯೊಳಗಣ ಧ್ವಜಗಳ ತುದಿಗಳೆಲ್ಲ ಮುರಿದು ಬೀಳು ವಂತೆ ಬಿರುಗಾಳಿಯು ಬೀಸಿತು; ದಡವನ್ನು ಮೀರಿ ಉಕ್ಕಿ ಹರಿಯುವ ಹೊಳೆಯ ವೇಗವು - ಬೈಲು ನೆಲವನ್ನು ಹೇಗೋ ಹಾಗೆ, ಸೇನೆಯನ್ನೆಲ್ಲ ಕ್ಲೇಶಗೊಳಿಸಿತು. ಆಮೇಲೆ-ಆಕಾಶದಲ್ಲಿ ಗೂಡುಕಟ್ಟಿರುವ ಸೂರ್ಯನು - ಬಡಿದು ಅಪ್ಪಳಿಸಿದ ಹಾವನ್ನು ಗರುಡನು ಹಿಡಿದು ಮೇಲಕ್ಕೊಯ್ಯುತ್ತ ಲಿರುವಲ್ಲಿ, ಅದರ ತಲೆಯಿಂದ ಜಾರಿಬಿದ್ದಿರುವ ಮಣಿಯಂತೆ ಕಳಾಹೀ ನನಾಗಿ ಕಾಣಬಂದನು. ಹೇಗೆ ಹಕ್ಕಿಗಳು ಗರಿಗಳನ್ನು ಕೆದರಿ ಹರಡಿ ಎಲ್ಲೆಲ್ಲಿಯೂ ಹಾರಾಡುತಲಿದ್ದುವು, ಮಣ್ಣಿನ ರಜವು ಆವರಿಸಿಕೊಂಡಿ ಡಿದ್ದಿತು, ಕೆಂಪಾದ ಮೋಡಗಳು ಬಾಂದಳದಲ್ಲಿ ತುಂಬಿದ್ದುವು. ಇದ ರಿಂದ ಮಲಿನಗಳಾದ ದಿಕ್ಕುಗಳು ಭಯಂಕರಗಳೆನಿಸಿ, ನೋಡಲಿಕ್ಕೆ ಅಸ ಹ್ಯಗಳಾಗಿದ್ದುವು. ಮತ್ತು - ಕ್ಷತ್ರಿಯರನ್ನೆಲ್ಲ ಇರಿದು, ರಕ್ತದಹೊ ಳೆಯಲ್ಲಿ ಮಿಂದು, ಪಿತೃತರ್ಪಣವನ್ನು ನೆರವೇರಿಸಿದ ಭಾರ್ಗವರಾಮನನ್ನು ಮರಳಿ ಪ್ರೇರಿಸುವವೊಬಂತೆ, ಹೆಣ್ಣು ನರಿಗಳು - ಸೂರ್ಯನಿಗಿದಿರಾಗಿ ನಿಂತು, ತಲೆಗಳನ್ನೆತ್ತಿ, ಭಯಂಕರವಾಗಿ ಕೂಗುತಲಿದ್ದುವು.

ಆ ಇದಿರುಗಾಳಿಯೇ ಮುಂತಾದ ವಿಕಾರಗಳನ್ನೆಲ್ಲ ಅವಲೋ ಕಿಸಿ, ಕಾರ್ಯಜ್ಞನಾದ ಕ್ಷಿತಿಪತಿಯು - ಕುಲಗುರುವಾದ ವಶಿಷ್ಠ ಮುನಿಯನ್ನು ಕುರಿತು, ಸಮಯೋಚಿತವಾದ ಶಾಂತಿಕರ್ಮವನ್ನು ಆಚರಿ ಸುವಂತೆ ಅರಿಕೆ ಮಾಡಿದನು, ತಪೋನಿಧಿಯೂ - ವಿಧಿಯನ್ನನುಸರಿಸಿ ಶಾಂತಿಯನ್ನೆಸಗಿ, ಶುಭಪರಿಣಾಮವಾಗುವುದೆಂದು ಅವನಿಪಾಲನನ್ನು ಸಂತೈಸಿದನು.

ಅಹಹ! ಅಷ್ಟುಹೊತ್ತಿಗೆ ಸರಿಯಾಗಿ ಪಡೆಯಮುಂದೆ ಒಂದಾ ನೊಂದು ತೇಜೋರಾಶಿಯು ಅಕಸ್ಮಾತ್ತಾಗಿ ಕಾಣಿಸಿಕೊಂಡಿತು. ಸೈನಿ ಕರು ಮಿಂಚು ಹೊಳೆದಾಗ ಮುಂಕಾದವುಗಳಂತಿರುವ ಕಣ್ಣುಗಳನ್ನು ಉಜ್ಜಿಕೊಂಡು ಮರಳಿ ನೋಡಲು, ಅದು ಅವಯವಗಳಿಂದೊಡಗೂಡಿ, ಸುಲಕ್ಷಣದ ಒಂದು ಮನುಷ್ಯ ವ್ಯಕ್ತಿಯಾಗಿದ್ದಿತು. ಆ ಪುರುಷ ಸಿಂಹನ ಹೆಗಲಿಗೆ ಲಕ್ಷಣವಾಗಿದ್ದ ಉಪವೀತವು ತಂದೆಯ ಅಂಶವಾಗಿದ್ದಿತು,

ಕೈಲಿದ್ದ ಪ್ರಬಲವಾದ ಬಿಲ್ಲು ತಾಯಿಯ ಭಾಗವಾಗಿತ್ತು, ಇದರಿಂದ ಆ ಮಹಾಪುರುಷನು - ಚಂದ್ರನಿಂದೊಡಗೂಡಿರುವ ಸೂರ್ಯನಹಾಗೂ, ಮಹಾಸರ್ಪದಿಂದ ಸಹಿತವಾದ ಚಂದನ ತರುವಿನಹಾಗೂ ಕಂಗೊಳಿಸುತಲಿದ್ದನು. ಯಾವ ಧೀರನು - ರೋಷದಿಂದ ಪರುಷವಾದ ಬುದ್ಧಿಯುಳ್ಳವನಾಗಿ, ಲೋಕಮರ್ಯಾದೆಯನ್ನೂ ಮೀರಿ ಇದ್ದ ತಂದೆಯ ಶಾಸನವನ್ನು ಎಳ್ಳಷ್ಟಾದರೂ ಅತಿಕ್ರಮಿಸಲಿಲ್ಲವೋ, ನಡುಗುತ ನಿಂತಿದ್ದ ಹೆತ್ತತಾಯಿಯ ತಲೆಯನ್ನೂ ಕತ್ತರಿಸಿ, ಮೊದಲು ಕರುಣೆಯನ್ನೂ, ಬಳಿಕ ಕ್ಷತ್ರಿಯರ ಶಿರಗಳನ್ನರಿದು ಧರಣಿಯನ್ನೂ ಜಯಿಸಿದನೋ, ಮತ್ತಾವನ ಬಲಗಿವಿಯ ಮೇಲೆ ಬೆಳಗುತಲಿರುವ ಜಪಮಣಿಮಾಲೆಯು - ಇಪ್ಪತ್ತುಸಾರಿ ಕ್ಷತ್ರಿಯ ಸಂತತಿಯನ್ನು ಸಂಹಾರಮಾಡಿದುದು, ಎಂಬ ಲೆಕ್ಕವನ್ನು ಮಣಿಗಳ ನೆಪದಿಂದ ತಿಳಿಸುತಲಿರುವಂತೆ ಕಾಣಬರುತಲಿದ್ದಿತೋ, ಆ ಧೀರ ಪುರುಷನೇ ಭಾರ್ಗವರಾಮನು. ತನ್ನ ತಂದೆಯ ಕೊಲೆಯಿಂದುಂಟಾದ ಮಹಾರೋಷದಿಂದ ಗಂಡುಗೊಡಲಿಯನ್ನು ಹಿಡಿದು ರಾಜವಂಶವನ್ನು ನಿರ್ನಾಮಮಾಡಲಿಕ್ಕೆ ದೀಕ್ಷೆಯನ್ನು ಕೈಗೊಂಡವನು. ಆ ಪರಶುರಾಮನನ್ನು ಕಂಡೇ ಈಗ-ಎಳೆಯ ಮಕ್ಕಳನ್ನೊಳಗೊಂಡಿರುವ ಮುದಿ ದೊರೆಯಾದ ದಶರಥನು-ಹೊಟ್ಟೆಯೊಳಗಣ ಕರುಳದಿರುವಂತೆ ಕಳವಳಿಸಿದುದು. ಗುಣಾಭಿರಾಮನಾಗಿ, ಕುಮಾರನಾಗಿರುವ ರಾಮನಲ್ಲಿಯೂ, ಹಗೆಯಾಗಿ, ಮಹಾಕ್ರೂರನೆನಿಸಿರುವ ಪರಶುರಾಮನಲ್ಲಿಯೂ ಸಮಾನವಾಗಿರುವ ರಾಮನಾಮವು - ಹಾರದಲ್ಲಿಯೂ ಸರ್ಪದಲ್ಲಿಯೂ ಸಮವಾಗಿರುವ ರತ್ನಜಾತಿಯಂತೆ, ದಶರಥನಿಗೆ ಹೃದಯಂಗಮವಾಗಿಯೂ, ಭಯದಾಯಕವಾಗಿಯೂ ಇದ್ದಿತು.

ಇಂತಹ ಪರಶುರಾಮನನ್ನು ಕಂಡಕೂಡಲೆ, " ಎಲೈ ಮುನಿವರ್ಯನೇ ! ಅರ್ಘ್ಯವನ್ನು ಪರಿಗ್ರಹಿಸಬೇಕು; ಅರ್ಘ್ಯವನ್ನು ಪರಿಗ್ರಹಿಸಬೇಕು " ಎಂದು ವಿನಯಪೂರ್ವಕವಾಗಿ ವಿಜ್ಞಾಪಿಸುತಲಿರುವ ದಶರಥನನ್ನು ಭಾರ್ಗವನು ಸಡ್ಡೆಮಾಡಲೇ ಇಲ್ಲ. ರಾಮನೆಲ್ಲಿದ್ದನೋ ಅತ್ತಕಡೆಗೆ ಗಿರ್ರನೆ ತಿರುಗಿದನು, ಕ್ಷತ್ರಿಯ ಜಾತಿಯ ವಿಷಯದಲ್ಲಿ ತನಗಿರುವ ರೋಷಾಗ್ನಿಯ ಕಿಡಿಗಳಂತೆ ತೀಕ್ಷ್ಣವಾಗಿರುವ ಕಣ್ಣುಗುಡ್ಡುಗಳನ್ನು

ತಿರುಗಿಸತೊಡಗಿದನು. ಮತ್ತು - ಒಂದು ಹಿಡಿಯಿಂದ ಬಿಲ್ಲಿನ ನಡುವೆ ಹಿಡಿದು, ಬೇರೊಂದು ಕೈ ಬೆರಳುಗಳ ನಡುವೆ ಅಂಬನ್ನು ಸಿಲುಕಿಸಿ, ಹೊಡಿಯಲಿಕ್ಕೆ ಸರಿಪಡಿಸುತ್ತಾ, ಹತ್ತಿರದಲ್ಲಿ ನಿರ್ಭಯನಾಗಿ ನಿಂತಿರುವ ರಾಮನಿದಿರಿಗೆ ಬಂದು ನಿಂತು ಇಂತೆಂದನು .—

ಎಲ ಹುಡುಗ! ತಂದೆಯನ್ನು ಕೊಂದುದರಿಂದ ಕ್ಷತ್ರಜಾತಿಯೇ ನನ್ನ ವೈರಕ್ಕೆ ಗುರಿಯಾಯಿತು, ಅದರಿಂದಲೇ ಬಾಹುಜರ ಪಡೆಯನ್ನೇ ಅನೇಕಸಾರಿ ಸನೆಬಡಿದು, ತಲೆಯನ್ನೆತ್ತದಂತೆ ಸುಳಿವನ್ನೇ ಅಡಗಿಸಿ, ಶಾಂತನಾಗಿದ್ದೆನು, ಮರಳಿ ಈಗ - ತೆಪ್ಪಗೆ ಮಲಗಿರುವ ಹಾವನ್ನು ಕೋಲಿನಿಂದ ತಿವಿದರೆ ಹೇಗೋಹಾಗೆ, ನಿನ್ನ ವಿಕ್ರಮವನ್ನು ಕೇಳಿ ರೋಷಗೊಳಿಸಲ್ಪಟ್ಟೆದೇನೆ. ಇದುವರೆಗೆ ಯಾವನೊಬ್ಬ ದೊರೆಯೂ ಹಿಡಿದೆತ್ತಿ ಹೆದೆಯನ್ನೇರಿಸಲಳವಲ್ಲದಿದ್ದ ಮೈಥಿಲನ ಮನೆಯೊಳಗಣ ಬಿಲ್ಲನ್ನು ನೀನು ಮುರಿದೆಯಂತೆ, ಆ ಸುದ್ದಿಯನ್ನು ಕೇಳಿದಮೇಲೆ ನಿನ್ನ ಧನುರ್ಭಂಗದಿಂದ ನನ್ನ ವೀರ್ಯವೆಂಬ ಶಿಖರವು ಮುರಿದುಹೋದಂತಾಗಿದೆ. ಇದಲ್ಲದೆ - ಹಿಂದೆ - ರಾಮ ಎಂದರೆ, ಆ ಶಬ್ದಕ್ಕೆ ಅರ್ಹನಾಗಿ ಲೋಕದಲ್ಲಿ ನಾನೊಬ್ಬನೇ ಗುರಿಯಾಗುತ್ತಿದ್ದೆನು. ನೀನು ತಲೆಯೆತ್ತುತ್ತ ಬಂದಮೇಲೆ, ಆ ಶಬ್ದವು ನನ್ನನ್ನು ಬಿಟ್ಟು, ತಲೆಕೆಳಗಾಗಿ, ನಿನ್ನನ್ನು ಗೋಚರಿಸಿಕೊಳ್ಳುತ್ತಾ, ನನಗೆ ಬಲು ನಾಚಿಕೆಯನ್ನುಂಟುಮಾಡುತ್ತಲಿದೆ ಮತ್ತು - ಈ ಪ್ರಪಂಚದೊಳಗೆ ಕ್ರೌಂಚಪರ್ವತದಲ್ಲಿಯೂ ಅಡ್ಡಿಯಿಲ್ಲದೆ ತೂರತಕ್ಕ ಅಸ್ತ್ರವನ್ನು ಧರಿಸಿರುವ ಈ ನನಗೆ, ನಮ್ಮ ತಂದೆಯ ಹೋಮಧೇನುವಿನ ಕರುವನ್ನು ಅಪಹರಿಸಿದ ಹೇಹಯ ದೇಶಾಧಿಪತಿಯಾದ ಕಾರ್ತವೀರ್ಯಾರ್ಜುನನೊಬ್ಬ, ನನ್ನ ಕೀರ್ತಿಯನ್ನು ಅಪಹರಿಸಲಿಕ್ಕೆ ಪ್ರಯತ್ನಿಸಿದ ನೀನೊಬ್ಬ, ಈ ಇಬ್ಬರೂ ಸಮವಾದ ತಪ್ಪುಮಾಡಿ, ನನಗೆ ಹಗೆಗಳಾಗಿದ್ದೀರಿ. ಆದಕಾರಣ ಕ್ಷತ್ರಿಯರನ್ನೆಲ್ಲ ಕೊನೆಗಾಣಿಸಿದುದಾದರೂ ನನ್ನ ವಿಕ್ರಮವು - ನಿನ್ನನ್ನು ಮುಗಿಸಿಕೊಳ್ಳದಿದ್ದರೆ, ನನ್ನನ್ನು ತೃಪ್ತಿಗೊಳಿಸುವುದಿಲ್ಲ. ಅಗ್ನಿಯ ಮಹಿಮೆಯು - ಹುಲ್ಲಿನ ಬಣಬೆಯನ್ನು ಸುಡುವಂತೆ, ಕಡಲಿನಲ್ಲಿಯೂ ಸುಡುತಲಿರುವುದರಿಂದಲೇ ಅಲ್ಲವೆ ಗಣನೆಗೆ ಬಂದಿದೆ? ಇದಲ್ಲದೆ, ನೀನು ಯಾವ ಬಿಲ್ಲನ್ನು ಮುರಿದೆಯೋ

ಆ ಶಿವನ ಬಿಲ್ಲಿನ ಸಾರವನ್ನು ಹಿಂದೆ ವಿಷ್ಣುವಿನ ತೇಜವು ಅಪಹರಿಸಿದೆ ಎಂದು ತಿಳಿ, ಹೊಳೆಯ ಹೊಯಿಲಿನ ವೇಗದಿಂದ ಬೇರುಗಳೆಲ್ಲ ಸಡಲಿ ಶಿಥಿಲವಾದಾಗ, ಮೆಲ್ಲಗೆ ಬೀಸುತಲಿರುವ ಗಾಳಿಯೂ ಆ ಮರವನ್ನು ಉರುಳಿಸಬಲ್ಲುದಲ್ಲವೆ ? ಆದಕಾರಣ ಜೀರ್ಣ ಧನುರ್ಭಂಗದಿಂದ ಹೆಮ್ಮೆ ಪಡಬೇಡ, ಆದರೆ - ಈಗ ಈ ನನ್ನ ಚಾಪದಲ್ಲಿ ಮೌರ್ವಿಯನ್ನು ಯೋಜನೆಮಾಡಿ, ಶರವನ್ನು ಸಂಧಿಸಿ ಸೆಳೆ, ರಣವೆಂಬುದು ಹಾಗಿರಲಿ, ನನ್ನ ಬಿಲ್ಲನ್ನು ಸೆಳೆಯುವುದರಿಂದಲೇ ನನ್ನೊಡನೆ ನೀನು ಸಮಾನ ಬಲವುಳ್ಳವನಾಗುವಿಯಾದಕಾರಣ ನಿನಗೆ ನಾನು ಸೋತೆನೆಂದೇ ಭಾವಿಸುವೆನು. ಹಾಗಿಲ್ಲದೆ - ಜ್ವಲಿಸುತಲಿರುವ ಈ ನನ್ನ ಗಂಡುಗೊಡಲಿಯ ಮೊನೆಯನ್ನು ಕಂಡು ಅಂಜಿದುದಾದರೆ, ಇದುವರಿಗೆ ವ್ಯರ್ಥವಾಗಿ ಶಿಂಜಿನಿಯನ್ನು ಸೆಳೆದು ಕಠಿನವಾದ ಬೆರಳುಗಳನ್ನೊಳಗೊಂಡಿರುವ ಕರತಲಗಳೆರಡನ್ನೂ ಜೋಡಿಸಿ ಅಭಯವನ್ನು ಬೇಡಿಕೊಳ್ಳು. ಆ ನಿನ್ನ ಅಭಯಾಂಜಲಿಯಿಂದ ಶಾಂತನಾಗುವೆನು ಎಂದನು.

ಬಹು ಭಯಂಕರವಾದ ನೋಟವುಳ್ಳ ಭಾರ್ಗವನು ಹಾಗೆ ಹೇಳುತ್ತಿರಲಾಗಿ, ದಾಶರಥಿರಾಮನು - ಹುಸಿನಗೆಯಿಂದ ಕೆಳದುಟಿಯನ್ನು ಅಲುಗಿಸುತ, ಆತನ ಬಿಲ್ಲನ್ನು ಕೈಯ್ಯಲ್ಲಿ ಹಿಡಿಯೋಣವನ್ನೇ ಸಮರ್ಥವಾದ ಪ್ರತ್ಯುತ್ತರವನ್ನಾಗಿ ಅಂಗೀಕರಿಸಿದನು. ಆಮೇಲೆ-ತನ್ನ ಪೂರ್ವದ ನಾರಾಯಣಾವತಾರದಲ್ಲಿನ ಬಿಲ್ಲನ್ನು ಕೈಯ್ಯಲ್ಲಿ ಹಿಡಿದಕೂಡಲೇ ಮತ್ತಷ್ಟು ಪ್ರಿಯದರ್ಶನನಾದನು. ಕೇವಲ ಜಲದಿಂದ ತುಂಬಿರುವ ಮುಂಗಾರು ಮೋಡವೇ ನೋಡಲಿಕ್ಕೆ ಬಲು ಅಂದವಾಗಿರುವುದು, ಹೀಗಿರುವಲ್ಲಿ ಇಂದ್ರಚಾಪದಿಂದಲೂ ಒಡಗೂಡಿದರೆ ಅದರ ಚೆಲುವಿಕೆಯನ್ನು ಹೇಳಬೇಕಾದುದೇನು

ಆ ಬಳಿಕ ರಾಮನು - ಆ ಕಾರ್ಮುಕದ ಒಂದು ತುದಿಯನ್ನು ನೆಲದಮೇಲಿಟ್ಟು ಹಿಡಿದು ನಿಲ್ಲಿಸಿ, ಅದರಲ್ಲಿ ಮೌರ್ವಿಯನ್ನು ಆರೋಪಿಸಿ ನಿಂತನು. ರಾಜನ್ಯವರ್ಗಕ್ಕೆ ರಿಪುವಾದ ಭಾರ್ಗವನು - ಹೊಗೆಯಮಾತ್ರವೇ ಉಳಿದಿರುವ ಅಗ್ನಿಯಂತೆ ಕಳೆಗುಂದಿ ನಿಂತನು. ಆಮೇಲೆ ಆ ಈರ್ವರೂ ಕ್ರಮವಾಗಿ ಏರುತಲಿರುವ ಮತ್ತು ಇಳಿಯುತಲಿರುವ

ತೇಜಸ್ಸುಳ್ಳವರಾದರು. ಹುಣ್ಣಿಮೆಯ ದಿನದ ಸಂಜೆಯಲ್ಲಿನ ಚಂದ್ರಸೂರ್ಯರಂತೆ ಒಬ್ಬರಿಗೊಬ್ಬರು ಇದಿರಾಗಿ ನಿಂತಿರುವ ಆ ರಾಘವ ಭಾರ್ಗವರನ್ನು ಜನರು ಬಲು ಸಡಗರದಿಂದ ನೋಡುತಲಿದ್ದರು.

ಆ ಹಿಂದೆ ಕುಮಾರಸ್ವಾಮಿಗೆಣೆಯಾದ ದಾಶರಥಿಯು - ಕರುಣೆಯಿಂದ ಮೃದುವಾಗಿ, ತನ್ನ ವಿಷಯದಲ್ಲಿ ವೀರ್ಯವು ಅಡಗಿ ಇದಿರಿಗೆ ನಿಂತಿರುವ ಭಾರ್ಗವನನ್ನೂ, ತಾನು ಸಂಧಾನ ಮಾಡಿರುವ ಬಾಣವನ್ನೂ ಅವಲೋಕಿಸಿ ಇಂತೆಂದನು —

ಎಲೈ ಭೃಗುನಂದನನೇ ! ಯದ್ಯಪಿ, ನೀನು-ಇದುವರೆಗೆ ನನ್ನನ್ನು ಬಹಳವಾಗಿ ಹೀಯಾಳಿಸಿದೆ. ಆದರೆ, ಬ್ರಾಹ್ಮಣನೆಂದು ಭಾವಿಸಿ, ಸದಯನಾದುದರಿಂದಲೇ ಹೊಡೆಯಲು ಸಮರ್ಥನಾಗದೆ ಇದ್ದೇನೆ. ಆದರೆ ನನ್ನ ಬಾಣವು ವ್ಯರ್ಥವಾಗತಕ್ಕದಲ್ಲ, ಅದರಿಂದ ಈಗ ನೀನು ಇಲ್ಲಿಂದ ತೆರಳದಂತೆ ನಿನ್ನ ಗಮನವನ್ನು ಹೊಡೆಯಲೆ ? ಅಥವಾ ನೀನು ಆರ್ಜಿಸಿರುವ ಸ್ವರ್ಗಮಾರ್ಗವನ್ನು ಹೊಡೆಯಲೆ ? ಬೇಗನೆ ಹೇಳು ಎಂದನು.

ಆಗಲಾ ಭಾರ್ಗವಮುನಿಯು ರಾಮನನ್ನು ನೋಡಿ ಹೀಗೆಂದನು- ಎಲೈ ದಾಶರಥಿಯೆ ! ನಾನು ತತ್ತ್ವದೃಷ್ಟಿಯಿಂದ ನಿನ್ನನ್ನು ಪುರಾಣಪುರುಷನನ್ನಾಗಿ ತಿಳಿಯದೆ ಇಲ್ಲ. ಆದರೆ, ಈ ಕರ್ಮಭೂಮಿಯಲ್ಲಿ ಅವತರಿಸಿರುವ ನಿನ್ನ ವೈಷ್ಣವ ತೇಜಸ್ಸನ್ನು ನೋಡಬೇಕೆಂಬ ಬಯಕೆಯಿಂದಲೇ ನಿನಗೆ ಕೋಪವನ್ನುಂಟುಮಾಡಿದೆನು; ಆದಕಾರಣ, ನನ್ನ ತಂದೆಯ ಹಗೆಗಳನ್ನೆಲ್ಲ ಭಸ್ಮಮಾಡಿದವನೂ, ಸಾಗರ ಪರ್ಯಂತವಾದ ವಸುಧೆಯನ್ನೆಲ್ಲ ಸತ್ಪಾತ್ರದಲ್ಲಿ ವಿನಿಯೋಗಿಸಿದವನೂ ಆಗಿರುವ ನನಗೆ ನಿನ್ನಿಂದಾದ ಸೋಲೂ ಮೇಲೆನಿಸಿ, ಬಯಸತಕ್ಕದೇ ಆಗಿದೆ. ಅದರಿಂದ ಮತಿವಂತರೊಳಗೆ ಉತ್ತಮನೆನಿಸಿದ ಎಲೈ ರಾಘವನೇ ! ಪುಣ್ಯಕ್ಷೇತ್ರ ತೀರ್ಥಯಾತ್ರೆಗಾಗಿ ಇಷ್ಟವಾಗಿರುವ ನನ್ನ ಗಮನವನ್ನು ಹೊಡೆದು ತಡೆಯಬೇಡ. ನಾನು ಸಂಪಾದಿಸಿರುವ ಸ್ವರ್ಗಮಾರ್ಗವು ನಿನ್ನಿಂದ ಹಿಂಸಿಸಲ್ಪಟ್ಟರೂ, ಭೋಗದಲ್ಲಿ ನಿಸ್ಪೃಹನಾಗಿರುವ ನನ್ನನ್ನು ಪೀಡಿಸಲಾರದು, ಅದರಿಂದ ಅದನ್ನೇ ಹೊಡೆ ಎಂದನು.

ಆ ಬಳಿಕ ರಾಮನು - ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಮತ್ತು ಪೂರ್ವಾಭಿಮುಖನಾಗಿ ನಿಂತು ಅಮೋಘವಾದ ಪತ್ರಿಯನ್ನು ಪ್ರಯೋಗಿಸಿದನು. ಆ ರಾಮಸಾಯಕವು - ಭಾರ್ಗವನಿಂದ ಭದ್ರವಾಗಿ ರಚಿಸಲ್ಪಟ್ಟುದಾಗಿದ್ದ ಸ್ವರ್ಗಮಾರ್ಗಕ್ಕೆ ಅತಿಕ್ರಮಿಸಲಸಾಧ್ಯವೆನಿಸಿದ ತಡೆಯಾಯಿತು. ಆ ಮೇಲೆ ರಾಘವನು - ಕ್ಷಮಿಸಬೇಕು ಎಂದು ಹೇಳುತ್ತಾ, ತಪೋನಿಧಿಯಾದ ಭಾರ್ಗವನ ಚರಣಗಳಿಗೆ ಅಭಿವಂದಿಸಿದನು. ಮಹಾಬಲಶಾಲಿಗಳಾದ ಧೀರರು - ಶೌರ್ಯದಿಂದ ಹಗೆಗಳನ್ನು ಸೋಲಿಸಿದಮೇಲೆ, ಆ ಶತ್ರುಗಳ ವಿಷಯದಲ್ಲಿ ತಗ್ಗೋಣವೆಂಬುದು - ಜಯಶಾಲಿಗಳಿಗೆ ಹೇರಳವಾದ ಕೀರ್ತಿಯನ್ನೇ ಉಂಟುಮಾಡುವುದಲ್ಲವೆ ? ಮತ್ತೆ ಪರಶುರಾಮನು - ದಾಶರಥಿ ರಾಮನನ್ನು ನೋಡಿ ಎಲೈ ದಯಾಳುವೆ ! ತಾಯಿಯಿಂದ ಬಂದ ನನ್ನ ರಜೋಗುಣ ಸಂಬಂಧವನ್ನು ತೊಲಗಿಸಿ, ತಂದೆಯಿಂದ ಆಗತವಾಗಿರುವ ಸತ್ವಗುಣಪ್ರಧಾನವಾದ ಶಾಂತಿಯನ್ನು ನನಗೆ ಕಲ್ಪಿಸಿ ಇದ್ದೀಯೆ. ಅದರಿಂದ ಅನಿಂದಿತಫಲವಾದ ಮೋಕ್ಷದಲ್ಲಿ ಅಭಿಲಾಷೆಯುಳ್ಳ ಈ ನನಗೆ ನೀನು - ನಿಂದಿತಫಲದ ಸ್ವರ್ಗಮಾರ್ಗವನ್ನು ಭಂಗಪಡಿಸಿದ ನಿಗ್ರಹವೂ ಅನುಗ್ರಹವಾಗಿಯೇ ಪರಿಣಮಿಸಿ ಇದೆ. ಆದಕಾರಣ ನಾನು ಇನ್ನು ಹೊರಡುವೆನು; ದೇವಕಾರ್ಯಸಿದ್ಧಿಯನ್ನು ಸಂಪಾದಿಸಬೇಕೆಂಬ ನಿನ್ನ ಬಯಕೆಯು ನಿರ್ವಿಘ್ನವಾಗಿ ನೆರವೇರಲಿ ಎಂದು ಸೌಮಿತ್ರಿ ಸಹಿತನಾದ ಲಕ್ಷ್ಮಣಾಗ್ರಜನನ್ನು ಕುರಿತು ಹೇಳಿ, ಭಾರ್ಗವಮುನಿಯು ಅದೃಶ್ಯನಾದನು.

ಪರಶುರಾಮನು ತೆರಳಿದನು, ಜಯಶಾಲಿಯಾದ ರಾಮನನ್ನು ದಶರಥನು ಎರಡು ಕೈಗಳಿಂದಲೂ ಬಾಚಿ ತಬ್ಬಿದನು. ಅಪಾರವಾದ ವಾತ್ಸಲ್ಯವು ಹೆಚ್ಚಿ ಮೈಮರೆದು, ಮುಂದಲೆಯಲ್ಲಿ ಮುತ್ತಿಟ್ಟನು. ಮಗನನ್ನು ಮರಳಿ ಹುಟ್ಟಿದವನನ್ನಾಗಿ ನೆನೆದನು. ಅರಸಿಗೆ ಕ್ಷಣಕಾಲಮಾತ್ರ ದುಃಖವುಂಟಾಗಿ, ಒಡನೆ ಸಂತೋಷಲಾಭವಾದುದು - ಕಾಡ್ಗಿಚ್ಚಿನಿಂದ ಆಕ್ರಮಿಸಲ್ಪಟ್ಟು ಬೇಯತೊಡಗಿದ ತರುವಿಗೆ, ಕೂಡಲೆ ಹೇರಳವಾದ ಮಳೆಗರೆದಂತಿದ್ದಿತು.

ಬಳಿಕ ಶರ್ವನಿಗೆ ಸ್ವಲ್ಪ ಕಡಿಮೆಯೆನಿಸಿದ ಆ ದಶರಥ ಭೂಪಾಲನು - ದಾರಿಯಲ್ಲಿ ಅಣಿಯಾಗಿದ್ದ ಗೂಡಾರಗಳಲ್ಲಿ ಮೂರಿರುಳನ್ನು ಕಳೆದು, ತನಗೆ ಸೊಸೆಯಾಗಿ ಬರುತಲಿರುವ ಮೈಥಿಲಿಯನ್ನು ನೋಡಬೇಕೆಂದು ತವಕಿಸುತ, ಮುಖಗಳನ್ನು ಒಟ್ಟಿಗೆ ಒತ್ತಾಗಿ ನಿಲ್ಲಿಸಿದುದರಿಂದ ಕನ್ನೈದಿಲೆಗಳಿಂದಲಂಕರಿಸಲ್ಪಟ್ಟವುಗಳಂತಿರುವ ಗವಾಕ್ಷಗಳಿಂದ ಬಲು ಅಂದವಾಗಿರುವ ಅಯೋಧ್ಯಾ ನಗರವನ್ನು ಪ್ರವೇಶಿಸಿದನು.

—ಇಂತು ಸೀತಾವಿವಾಹ ವರ್ಣನನೆಂಬ ಹನ್ನೊಂದನೆಯ ಅಧ್ಯಾಯಂ—



ಶ್ರೀಃ

ಶ್ರೀ ರಾಮಚನ್ದ್ರಾಯನಮಃ.



## ಹನ್ನೆರಡನೆಯ ಅಧ್ಯಾಯ

ಸೂಚನೆ ॥ ರಾಮನ ನಟವಿಗೆ ಕಳುಪಿದ ।
ಭೂಮಿಪ ನಳಿದಂ ಗಡತ್ತ ಲಬಲಾಹರನಂ ॥
ರಾಮಂ ಕೊಂದೈ ತಂದಂ ।
ಕೋಮಲೆಯಂ ಹರಿ ಸುರಾರಿ ಸೌಮಿತ್ರಿಯರಿಂ ॥

ದಶರಥನು-ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ವಿಷಯಗಳ ಸವಿಯನ್ನೆಲ್ಲ ಅನುಭವಿಸಿದುದಾಯಿತು, ಕಡೆಯ ಅವಸ್ಥೆಗೆ ಬಂದನು, ಕೊನೆಗಾಣುವುದು ಹತ್ತಿರವಾಯಿತು, ಆಗ - ಹಣಿತೆಯು ಎಣ್ಣೆಯನ್ನೆಲ್ಲ ಹೀರಿ, ಬತ್ತಿಯು ತುದಿಗೆ ಬಂದು, ತಣ್ಣಗಾಗಲಿಕ್ಕೆ ಸಿದ್ಧವಾದ ಬೆಳಗಿನ ದೀವಿಗೆಯು ಬೆಳಕಿನಂತಿದ್ದನು. ಮುಪ್ಪು - ಕೈಕೇಯಿಗೆ ಹೆದರಿರುವುದೆಂಬಂತೆ, ನರೆಯು ನೆಪದಿಂದ ದೊರೆಯ ಕಿವಿಯ ಹತ್ತಿರಕ್ಕೆ

ಬಂದು, ರಾಜ್ಯಲಕ್ಷ್ಮಿಯನ್ನು ಬೇಗನೆ ರಾಮನಿಗೊಪ್ಪಿಸು ಎಂದು ಸೂಚಿಸುತಲಿದ್ದಿತು. ಆ ಮೇಲೆ ರಾಮನ ಪಟ್ಟಾಭಿಷೇಕದ ಸುದ್ದಿಯು-ತೋಟದಲ್ಲಿನ ನೀರಿನ ಕಾಲುವೆಯು-ಒಂದು ಮರದಬುಡದ ಪಾದೆಯಿಂದ ಮತ್ತೊಂದು ತರುತಲದ ಆಲವಾಲಕ್ಕೆ ಹರಿಯುವಂತೆ, ಕರ್ಣಾಕರ್ಣಿಕವಾಗಿ ಪುರಜನರಲ್ಲೆಲ್ಲ ಹರಡಿ ಪ್ರತಿಯೊಬ್ಬರನ್ನೂ ಹರ್ಷಗೊಳಿಸುತಲಿದ್ದಿತು, ರಾಮನ ರಾಜ್ಯಾಭಿಷೇಕಕ್ಕೆ ದೊರೆಯು ಅಣಿಮಾಡಿಸುತಲಿರುವ ಸಂಭಾರಗಳನ್ನೂ, ಕ್ರೂರವಾದ ಮನೋಗತವುಳ್ಳ ಕೈಕೇಯಿಯು- ಶೋಕದಿಂದ ಬಿಸಿಯಾದ ದಶರಥನ ಕಣ್ಣೀರುಗಳಿಂದ ಮಲಿನಗಳಾಗುವಂತೆಮಾಡಿದಳು. ಮುಂಗಾರು ಮಳೆಗರೆದು ಒಳಗೆ ಸೆಕೆಹುಟ್ಟಲು ನೆಲವು - ತನ್ನಲ್ಲಿ ಅಡಗಿದ್ದ ಹಾವುಗಳನ್ನು ಬಿಲದ ಬಾಯಿಂದ ಹೊರಗೆ ಹೊರಡಿಸುವಹಾಗೆ, ಚಂಡಿಯಾದ ಕೈಕೇಯಿಯು - ಹಿಂದೆ ತನ್ನ ಗಂಡನು ಕೊಟ್ಟದ್ದು ಮನದೊಳಗವಿತುಕೊಂಡಿದ್ದ ಎರಡು ವರಗಳನ್ನೂ ಕಾರಿದಳು. ಅವುಗಳಲ್ಲೊಂದಕ್ಕೆ ಹದಿನಾಲ್ಕು ವರ್ಷಗಳ ಕಾಲ ರಾಮನನ್ನು ಕಾಡಿಗೆ ಕಳುಹಿಸುವಂತೆ ಕೇಳಿದಳು, ಮತ್ತೊಂದಕ್ಕೆ ತನಗೆ ವೈಧವ್ಯಪ್ರಾಪ್ತಿ ಮಾತ್ರವೆ ಫಲವಾಗಿರುವ ರಾಜ್ಯಲಕ್ಷ್ಮಿಯನ್ನು ತನ್ನ ಮಗನಿಗಾಗಬೇಕೆಂದು ಬಯಸಿದಳು. ರಾಮನಾದರೆ ತನ್ನ ತಂದೆಯು-“ ನೀನು ರಾಜ್ಯವನ್ನು ಪರಿಗ್ರಹಿಸಬೇಕು ” ಎಂದು ಮೊದಲು ತನಗೆ ವಾಗ್ದಾನದಿಂದ ಒಪ್ಪಿಸಿದ ರಾಜ್ಯವನ್ನು ಅಳುತ್ತಾ ಒಪ್ಪಿಕೊಂಡಿದ್ದನು. ಆ ಮೇಲೆ—„ ವನಕ್ಕೆ ಹೊರಡಬೇಕು ,, ಎಂದು ಹೇಳಿದ ಆತನ ಅನುಜ್ಞೆಯನ್ನು ಬಹು ಸಂತೋಷದಿಂದ ಅಂಗೀಕರಿಸಿದನು.

ಮೊದಲು ವಿವಾಹಮಂಗಳ ದೀಕ್ಷಾದುಕೂಲಗಳನ್ನು ಉಟ್ಟದ್ದು, ಈಗ ಅವುಗಳನ್ನು ಕಳೆದು ನಾರುಬಟ್ಟೆಗಳನ್ನುಡುತ್ತಿರುವಾಗಲೂ, ರಾಮನ ಮುಖರಾಗವು ಏಕರೂಪವಾಗಿದ್ದುದನ್ನು ನೋಡಿ ಪುರಜನರೆಲ್ಲ ಬಹಳವಾಗಿ ವಿಸ್ಮಯಪಡುತಲಿದ್ದರು. ದಾಶರಥಿಯು - ಸೀತಾಲಕ್ಷ್ಮಣರಿಂದ ಸಹಿತನಾಗಿ, ತಂದೆಯನ್ನು ಸತ್ಯಭ್ರಷ್ಟನನ್ನಾಗಿ ಮಾಡಬಾರದೆಂದು, ದಂಡಕಾರಣ್ಯವನ್ನು ಪ್ರವೇಶಿಸಿದನು. ಸಚ್ಚರಿತ್ರೆಯಿಂದ ಸಜ್ಜನರ ಮನಸ್ಸುಗಳನ್ನು ಹೊಕ್ಕನು.

ಅನಂತರದಲ್ಲಿ ದಶರಥನು - ಮೋಹದ ಮಗನ ಅಗಲಿಕೆಯನ್ನು ತಾಳಲಾರದೆ ಪೂರ್ವದಲ್ಲಿ ಅರಣ್ಯದೊಳಗೆ ತಾನು ಮಾಡಿದ ಕರ್ಮದಿಂದುಂಟಾದ ಮುನಿಶಾಪವನ್ನು ನೆನಸಿಕೊಂಡು, ತನ್ನ ಮರಣವನ್ನೇ ಅದಕ್ಕೆ ಪ್ರಾಯಶ್ಚಿತ್ತವನ್ನಾಗಿ ಭಾವಿಸಿದನು.

ಅದುವರೆಗೆ ಭರತಶತ್ರುಘ್ನರು ಸೋದರರದ ಮಾವನ ಮನೆಯಲ್ಲಿ ರುತ್ತಿದ್ದರು, ರಾಮಲಕ್ಷ್ಮಣರಾದರೆ ಕಾಡುಸೇರಿದರು, ದಶರಥನು ದಿವಂಗತನಾದನು. ಹೊಂಚುಹಾಕುತಲಿದ್ದ ಬಲಗಾರರಾದ ಹಗೆಗಳಿಗೆ ಸಂಚು ಸಿಕ್ಕಿದ್ದರಿಂದ ರಾಜ್ಯವು ಭೋಗ್ಯವಸ್ತುವಾಗುವ ಸಮಯ ಬಂದಿತು. ಆಗ ಅನಾಥರಾದ ಅಮಾತ್ಯರು - ಮಾತುಲನ ಮನೆಯೊಳಿದ್ದ ಭರತನನ್ನು ತಂದೆಸತ್ತ ಸುದ್ದಿಯು ತಿಳಿಯದಹಾಗೆ ಆಪ್ತಮಂತ್ರಿಗಳ ಮೂಲಕ ಕರೆತರಿಸಿದರು, ಭರತನು-ತನ್ನ ತಂದೆಗೆ ಆ ವಿಧವಾಗಿ ಒದಗಿದ ಆಪತ್ತನ್ನು ಕೇಳಿದನು, ಆ ಮೇಲೆ - ತನ್ನ ತಾಯಿಗೆ ಪರಾಙ್ಮುಖನಾದುದಲ್ಲದೆ, ರಾಜ್ಯಲಕ್ಷ್ಮಿಗೂ ವಿಮುಖನಾದನು. ಪರಿವಾರದೊಡನೆ ರಾಮದರ್ಶನಾರ್ಥವಾಗಿ ವನಕ್ಕೆ ಹೊರಟನು, ಕಾಡುಜನರಿಂದ ಸೀತಾಲಕ್ಷ್ಮಣಸಹಿತನಾದ ಅಣ್ಣನು ಇಳಿದುಕೊಂಡಿದ್ದ ಸ್ಥಳಗಳನ್ನು ಕೇಳಿತಿಳಿದು ನೋಡಿದನು, ಕಣ್ಣುಗಳಲ್ಲಿ ಧಾರಾಳವಾಗಿ ನೀರು ಸುರಿಸುತ್ತಾ ಮುಂದೆ ಹೊರಟನು. ಚಿತ್ರಕೂಟದ ಬಳಿಗೆ ಬಂದನು, ಅಣ್ಣನನ್ನು ಕಂಡನು, ತಂದೆಯ ಸ್ವರ್ಗಪ್ರಯಾಣವನ್ನು ಅರಿಕೆ ಮಾಡಿದನು, ಎಂಜಲಾಗದ ಐಶ್ವರ್ಯದಿಂದೊಡಗೂಡಿರುವ ರಾಜ್ಯಲಕ್ಷ್ಮಿಯನ್ನು ಪರಿಗ್ರಹಿಸಲು ದಯೆಮಾಡಬೇಕೆಂದು ಸೆರಗೊಡ್ಡಿ ಬೇಡಿದನು. ಏಕೆಂದರೆ — ಭರತನು - ಸದಾಚಾರ ಸಂಪನ್ನನು, ಧರ್ಮಶಾಸ್ತ್ರವನ್ನೆಲ್ಲ ಚೆನ್ನಾಗಿ ಬಲ್ಲವನು, ಅದರಿಂದಲೇ ರಾಜ್ಯಲಕ್ಷ್ಮಿಯನ್ನು ಅಣ್ಣನು ಪರಿಗ್ರಹಿಸುವುದಕ್ಕಿಂತ ಮೊದಲು ತಾನು ಸ್ವೀಕರಿಸಿದರೆ ಪರಿವೇತ್ತನಾಗುವೆನು ಎಂದು ಹೆದರಿದ್ದನು. ಆದರೆ - ಸ್ವರ್ಗತನಾದ ತಂದೆಯ ಆಜ್ಞಾರೂಪವಾದ ಧರ್ಮಪಾಶದಿಂದ ಬದ್ಧನಾಗಿರುವ ಅಣ್ಣನ ಕಟ್ಟನ್ನು ಸಡಲಿಸಿ, ಅವನನ್ನು ಹೊರಗೆ ತೆಗಿಯಲಿಕ್ಕೆ ಭರತನಕೈಲಾಗಲಿಲ್ಲ. ಆ ಮೇಲೆ ರಾಜ್ಯಕ್ಕೆ ಅಧಿದೇವತೆಯಾಗಿರುವಂತೆ ಮಾಡಲು ಪಾದುಕೆಗಳನ್ನುದಯೆಪಾಲಿಸಬೇಕೆಂದು

ಅಣ್ಣನನ್ನು ಕೇಳಿಕೊಂಡನು. ಹಾಗೆಯೇ ಆಗಲೆಂದು ಒಪ್ಪಿಕೊಂಡ ಅಣ್ಣನಿಂದ ಪಾದುಕೆಗಳನ್ನು ಪಡೆದು ಬಂದ ಭರತನು — ಅಯೋಧ್ಯಾ ನಗರವನ್ನು ಪ್ರವೇಶಿಸಲೇ ಇಲ್ಲ, ನಂದಿ ಗ್ರಾಮದಲ್ಲಿಯೇ ವಾಸಮಾಡಿಕೊಂಡು, ಎರವಲಾಗಿ (ನ್ಯಾಸ) ಪಡೆದಿರುವಂತೆ ರಾಜ್ಯಲಕ್ಷ್ಮಿಯನ್ನು ಆಳುತಲಿದ್ದನಲ್ಲದೆ ಅನುಭವಿಸಲಿಲ್ಲ ಅಣ್ಣನಲ್ಲಿ ದೃಢಭಕ್ತಿಯುಳ್ಳವನಾಗಿ, ಅಯೋಧ್ಯಾ ನಗರವನ್ನು ಹೊಗದೆ, ರಾಜ್ಯಲಕ್ಷ್ಮಿಯಲ್ಲಿ ಆಶೆಯನ್ನು ತೊರೆದು, ನಂದಿ ಗ್ರಾಮದಲ್ಲಿ ವನ್ಯವೃತ್ತಿಯಿಂದ ವಾಸಮಾಡುತಲಿದ್ದ ಭರತನು - ತನ್ನ ತಾಯಿ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಆಚರಿಸುವಂತಿದ್ದನು.

ಇತ್ತ ಬಹು ಶಾಂತನಾಗಿರುವ ರಾಮನು - ಸೀತಾಲಕ್ಷ್ಮಣರಿಂದ ಸಹಿತನಾಗಿ, ಕಾಡಿನಲ್ಲಿ ಬೆಳೆದ ಗೆಡ್ಡೆಗೆಣಸುಗಳಿಂದ ಹೊಟ್ಟೆಯನ್ನು ಹೊರೆಯುತ್ತಾ, ತನ್ನ ಪೂರ್ವಿಕರಾದ ಇಕ್ಷ್ವಾಕು ಕುಲದರಸರು ಮುಪ್ಪಿನಲ್ಲಿ ಆಚರಿಸುವ ವಾಡಿಕೆಯಲ್ಲಿದ್ದ ವನವಾಸ ವ್ರತವನ್ನು ತಾನು ತಾರುಣ್ಯದಲ್ಲಿದ್ದುಕೊಂಡೇ ಆಚರಿಸುತಲಿದ್ದನು.

ಒಂದಾನೊಂದು ಸಮಯದಲ್ಲಿ ರಾಮನು - ಕಾಡಿನಲ್ಲಿ ಅಲೆದು ಬಳಲಿದ್ದುದರಿಂದ ಒತ್ತಾದ ನೆಳಲುಳ್ಳ ಒಂದು ಮರದ ಬುಡದಲ್ಲಿ ಸೀತೆಯ ತೊಡೆಯಮೇಲೆ ತಲೆಯನ್ನಿಟ್ಟು ಪವಳಿಸಿದ್ದನು.

ಇಂದ್ರಪುತ್ರನೆನಿಸಿದ ಕಾಕಾಸುರನೆಂಬುವವನು- ಕಾಗೆಯ ರೂಪದಿಂದ ಅಲ್ಲಿಗೆ ಬಂದು, ಜಾನಕಿಯ ಹೃದಯದೊಳಗೆ-ಸುಶೀಲ, ಪತಿಭಕ್ತಿ, ಮುಂತಾದ ಸುಗುಣಗಳ ಜತೆಯಲ್ಲಿ ದೋಷವನ್ನು ಹುಡುಕುತಲಿರುವನೆಂಬಂತೆ, ಆಕೆಯ ಎದೆಯನ್ನು ಕೊಕ್ಕಿನಿಂದ ಕುಕ್ಕಿದನು. ವೀರ ಪತಿವ್ರತೆಯಾದ ಸೀತೆಯು - ಗಾಢನಿದ್ರೆಯಲ್ಲಿರುವ ತನ್ನ ಪತಿಗೆ ಎಚ್ಚರವಾಗುವುದೆಂದು ಅಂಜಿ, ಆ ಹಿಂಸೆಯನ್ನು ತಾಳಿದಳು, ಆ ಮಾಂಸಾಹಾರಿಯಾದ ವಾಯಸವು ಮಾಡಿದ ಗಾಯದಿಂದ ಉದಿರಿದ ಬಿಸಿಯಾದ ರಕ್ತಬಿಂದುಗಳು ರಾಮನ ಮುಖದಮೇಲೆ ಬಿದ್ದುವು, ಕೂಡಲೆ ಎಚತ್ತನು. ಮಹಾಸರ್ಪದಂತೆ ಸಿಟ್ಟುಗೊಂಡನು, ಒಂದು ದರ್ಭೆಯ ಹುಲ್ಲಿನಲ್ಲಿ ಬ್ರಹ್ಮಾಸ್ತ್ರವನ್ನು ಅಭಿಮಂತ್ರಿಸಿ ಆ ಬಲಿಭೋಜನದಮೇಲೆ ಪ್ರಯೋಗಿಸಿದನು.

ಆ ಚಿರಜೀವಿಯು - ಮೂಲೋಕದಲ್ಲಿಯೂ ಅಲೆದು, ಎಲ್ಲಿಯೂ ರಕ್ಷಕನನ್ನು ಕಾಣದೆ, ಮರಳಿ ರಾಮನನ್ನೇ ಮರೆಹೊಕ್ಕು, ತನ್ನ ಒಂದು ಕಣ್ಣನ್ನು ಮಾತ್ರ ವ್ಯರ್ಥವಾದುದನ್ನಾಗಿಮಾಡುವ ರಾಮಬಾಣಕ್ಕೆ ಬಲಿಕೊಟ್ಟು, ತನ್ನ ಆತ್ಮವನ್ನು ಉಳಿಸಿಕೊಂಡಿತು.

ತರುವಾಯ ರಾಘವನು - ತಾನು ವಾಸಮಾಡುತಲಿರುವ ಚಿತ್ರಕೂಟ ಪರ್ವತವು ಅಯೋಧ್ಯೆಗೆ ಹತ್ತಿರವಾಗಿರುವುದೆಂದೂ, ಆಗಾಗ ಭರತನೇ ಮುಂತಾದವರು ಬಂದು ತೊಂದರೆಗೊಳಿಸಬಹುದೆಂದೂ ಊಹಿಸಿ, ಆ ಸ್ಥಲವನ್ನು ಬಿಟ್ಟು ಹೊರಟನು. ಅಲ್ಲಿದ್ದ ಸಾರಂಗಗಳು ತಮ್ಮನ್ನು ಬಹು ಮಮತೆಯಿಂದ ಸಾಕುತಲಿದ್ದ ರಾಮಾದಿಗಳ ಪ್ರಯಾಣದಿಂದ ಬಹಳವಾಗಿ ಕಳವಳಗೊಂಡುವು.

ಅಲ್ಲಿಂದ ಮುಂದೆ ರಾಮನು - ಅತಿಥಿಸತ್ಕಾರಗಳಿಗೆ ಅಣಿಯಾಗಿದ್ದ ತಪಸ್ವಿಗಳ ಆಯಾಯ ಪುಣ್ಯಾಶ್ರಮಗಳಲ್ಲಿ ಟಂಕಿಗಳನ್ನು ಮಾಡಿಕೊಂಡು, ಕ್ರಮವಾಗಿ, ಸೂರ್ಯನು ಮೇಷಾದಿ ರಾಶಿಗಳನ್ನು ದಾಟಿ ಹೋಗುವಹಾಗೆ, ದಕ್ಷಿಣ ದೆಸೆಯನ್ನು ಕುರಿತು ಬಂದನು. ಆ ರಘುನಂದನನನ್ನು ಹಿಂಬಾಲಿಸುತಲಿರುವ ವೈದೇಹಿಯು - ಕೈಕೇಯಿಯು ಬಲಾತ್ಕಾರದಿಂದ ತಡೆದರೂ, ಅವಳನ್ನು ತಿರಸ್ಕರಿಸಿ,ಗುಣಾನುರಕ್ತಳಾಗಿ, ರಾಮನ ಬೆನ್ನಟ್ಟಿ ಬರುತಲಿರುವ ರೂಪವತಿಯಾದ ರಾಜ್ಯಲಕ್ಷ್ಮಿಯಂತೆ ಕಂಗೊಳಿಸುತಲಿದ್ದಳು. ಮತ್ತು - ಅತ್ರಿಮುನಿಯ ಧರ್ಮಪತ್ನಿಯಾದ ಅನಸೂಯೆಯು ಪ್ರೀತಿಯಿಂದ ಕೊಟ್ಟ ಪುಣ್ಯಗಂಧದ ಅಂಗರಾಗವನ್ನು ಪಡೆದು, ಅದರ ಸುವಾಸನೆಯಿಂದ ಆ ವನವನ್ನು, ಪರಿಮಳಭರದಿಂದ ಪುಷ್ಪಗಳನ್ನು ಬಿಟ್ಟು ಹಾರಿಬರುತಲಿರುವ ದುಂಬಿಗಳನ್ನುಳ್ಳುದನ್ನಾಗಿ ಮಾಡಿದಳು.

ಹಾಗೆಯೇ ಪ್ರಯಾಣ ಮಾಡುತಲಿರುವಲ್ಲಿ, ಸಂಜೆಯ ಹೊತ್ತಿನ ಮೋಡದಂತೆ ಮೈಬಣ್ಣವುಳ್ಳ ವಿರಾಧನೆಂಬ ಘೋರನಾದ ರಾಕ್ಷಸನು ಚಂದ್ರನನ್ನು ರಾಹುಗ್ರಹದಂತೆ,ರಾಮನ ಮಾರ್ಗವನ್ನು ತಡೆದು ನಿಂತನು. ಕೂಡಲೆ, ಲೋಕಕಂಟಕನಾದ ಆ ರಕ್ಕಸನು-ರಾಮಲಕ್ಷ್ಮಣರ ನಡುವೆ ಇದ್ದ ಅವನಿಜೆಯನ್ನು, ಶ್ರಾವಣ ಭಾದ್ರಪದ ಮಾಸಗಳ ಮಧ್ಯದಲ್ಲಿ

ವೃಷ್ಟಿಯನ್ನು, ವರ್ಷಪ್ರತಿಬಂಧದಂತೆ ಕೊಂಡೊಯ್ದನು, ಅದನ್ನು ಕಂಡ ಕಾಕುತ್ಸ್ಥರೀರ್ವರೂ- ಆ ನಿಶಿಚರನನ್ನು ಸದೆಬಡಿದು, ಅಲ್ಲಿಯೇ ಕೆಡಹಿದರೆ ದುರ್ವಾಸನೆಯಿಂದ ಆಶ್ರಮ ಭೂಮಿಯನ್ನು ಕೆಡಿಸುವನೆಂದು ನೆಲದಲ್ಲಿ ಹೂಳಿಬಿಟ್ಟರು. ಮುಂದೆ ಪಯಣವನ್ನು ಬೆಳೆಸಿದರು, ಅಗಸ್ತ್ಯ ಮುನಿಯ ಸಂದರ್ಶನವನ್ನು ಮಾಡಿದರು, ಆತನ ಅಪ್ಪಣೆಯ ಪ್ರಕಾರ ಪಂಚವಟಿಯ ಪ್ರದೇಶಕ್ಕೆ ಬಂದರು, ಹಿಂದೆ ವಿಂಧ್ಯಪರ್ವತವು ತನ್ನ ಪೂರ್ವಸ್ಥಿತಿಯಲ್ಲಿಯೇ ನಿಂತಹಾಗೆ ಅಲ್ಲಿಯೆ ನೆಲಸಿದರು.

ಹೀಗೆ ಕೆಲವುಕಾಲ ಕಳೆಯುತ್ತಿರಲು, ಒಂದುವೇಳೆ - ರಾವಣನ ತಂಗಿಯಾದ ಶೂರ್ಪಣಖೆಯೆಂಬೊಬ್ಬ ರಕ್ಕಸಿಯು - ಬಿಸಿಲಿನ ಬೇಗೆಯಿಂದ ಬೆಂದ ಹೆಣ್ಣುಹಾವು ಚಂದನತರುವನ್ನು ಅರಸುವಹಾಗೆ, ಕಾಮ ಪರವಶಳಾಗಿ, ರಾಮನನ್ನು ಬಯಸುತ ಬಂದಳು. ರಾಘವನ ಸನ್ನಿಧಿಗೈತಂದಳು, ತನ್ನ ವಂಶಾವಳಿಯನ್ನರುಹಿದಳು, ಸೀತೆಯ ಇದಿರಿಗೇ ತನ್ನನ್ನು ವರಿಸಬೇಕೆಂದು ಬೆಸಗೊಂಡಳು. ಕಾಮನು ಯಾರಿಗೂ ಹಿತನಲ್ಲ, ಮೇರೆಮೀರಿದರೆ ಕಾಮಿನಿಯರಿಗೆ ಕಾಲದೇಶಗಳನ್ನು ಮರೆಯಿಸುವನು.

ಗೂಳಿಯ ಹುಳಲಿನಂತೆ ಹೆಗಲುಳ್ಳ ರಾಮನು ವೃಷಸ್ಯಂತಿಯಾದ ಆ ಶೂರ್ಪಣಖಿಯನ್ನು ಕುರಿತು, ಎಲೆ ಬಾಲೆ ! ನಾನು ಸಪತ್ನೀಕನಾಗಿದೇನೆ, ನೀನು ನನ್ನ ಅನುಜನನ್ನು ಭಜಿಸುವುದು ಮೇಲು, ತೆರಳು ಎಂದಾಜ್ಞಾಪಿಸಿದನು. ಆ ರಾಕ್ಷಸಿಯು- ಮೊದಲು ರಾಮನಬಳಿಗೆ ಬಂದು, ಅಲ್ಲಿಂದ ಲಕ್ಷ್ಮಣನನ್ನು ಸೇರಿ, ಆತನಿಂದಲೂ ತಿರಸ್ಕಾರವನ್ನು ಹೊಂದಿ, ಮರಳಿ ರಾಘವನಾಸರೆಗೈತಂದಳು, ಇದರಿಂದ, ಒಂದುಸಾರಿ ಒಂದು ದಡಕ್ಕೆ ಬಂದು, ಅಲ್ಲಿ ತಡೆಯುಮ್ಟಾಂತು, ಪುನಃ ಬೇರೊಂದು ತೀರಕ್ಕೈದಿ, ಅಲ್ಲಿಯೂ ಅಡ್ಡಿಯಾಗಲು, ಮರಳಿ ಹಿಂದಿನ ಗಡ್ಡೆಗೆ ಬಂದು ಸೇರುವ ಹೊಳೆಯಂತಿದ್ದಳು. ಚಂದ್ರೋದಯವು - ಗಾಳಿಯುಲುಗದಿರುವ ವೇಳೆಯಲ್ಲಿ ಕ್ಷಣಕಾಲ ಶಾಂತವಾಗಿದ್ದ ಕಡಲಿನ ಜಲವನ್ನು ಹೇಗೋಹಾಗೆ, ಮೈಥಿಲಿಯ ನಗೆಯು - ಸ್ವಲ್ಪಹೊತ್ತು ಸೌಮ್ಯವಾದ ಆಕಾರದಿಂದಿದ್ದ ಆ ಯಾಮಿನೀಚರಿಯನ್ನು ಬಹು ವಿಕಾರಗೊಳಿಸಿತು. ಕೂಡಲೆ ಶೂರ್ಪಣಖೆಯು - ಜಾನಕಿಯನ್ನು ಕುರಿತು ಎಲೆ ನಾರಿ ! ನನ್ನನ್ನು ನೋಡಿ

ನೀನು ಮಾಡುವ ಪರಿಹಾಸವು, ಹುಲ್ಲೆಯು ಹುಲಿಯನ್ನು ಹೀಯಾಳಿಸು ವಂತಿದೆ, ಒಳ್ಳೆಯದು, ಇದಕ್ಕೆ ತಕ್ಕ ಫಲವನ್ನು ಬೇಗನೆ ಅನುಭವಿಸ ಹೋಗುವೆ ? ಎಂದು ಹೇಳಿ, ಭಯದಿಂದ ಬಿರುಬಿರನೆ ಓಡಿಬಂದು, ಭರ್ತನ ತೊಡೆಯಮೇಲೆ ಕುಳಿತಿರುವ ಸೀತೆಯನ್ನು, ತನ್ನ ಹೆಸರಿಗನುಗು ಣವಾದ ಭಯಂಕರ ರೂಪವನ್ನಾಂತು ಸೆಳೆಯತೊಡಗಿದಳು. ಪರ್ಣ ಶಾಲೆಯ ಹೊರಗಿದ್ದ ಲಕ್ಷ್ಮಣನು - ಮೊದಲು ಬಲು ಸೌಮ್ಯವಾದ ಆಕಾರದಿಂದ ಬಂದ ಆ ರಕ್ಕಸಿಯು ಕೋಕಿಲೆಯಂತೆ ಮೃದುಮಧುರವಾದ ಮಾತನ್ನೂ ಕೇಳಿದ್ದನು, ಈಗ ಹೆಣ್ಣು ನರಿಯಂತೆ ಕ್ರೂರವಾಗಿ ಅಬ್ಬ ರಿಸುತಲಿರುವುದನ್ನೂ ಕೇಳಿದನು. ಓಹೋ! ಇವಳು ವಿಕಾರದಿಂದ ನಿಜರೂಪವನ್ನು ಪಡೆದಳು ಎಂಬುದನ್ನೂ ಅರಿತನು, ತತ್‌ಕ್ಷಣವೇ ಕತ್ತಿ ಯನ್ನು ಹಿರಿದನು, ಎಲೆಮನೆಯನ್ನು ಹೊಕ್ಕನು, ಅವಳ ಕಿವಿಮೂ ಗುಗಳನ್ನು ಕಳೆದನು, ಮೊದಲಿಗಿಂತ ಮತ್ತಷ್ಟು ವಿಕಾರವಾಗಿ ಭೀಷಣಳೆ ನಿಸುವಂತೆ ಮಾಡಿದನು. ಒಡನೆ ವಕ್ರನಾಸಿಕೆಯ ರಕ್ಕಸಿಯು ಆಗಸಕ್ಕೆ ಹಾರಿದಳು, ಬಿದಿರಿನಂತೆ ಗೆಣ್ಣುಗಳುಳ್ಳ ತರ್ಜನಿಯನ್ನು ಬಾಗಿಸಿರುವ ಕರವನ್ನು ತೋರಿದಳು, ರಾಮಲಕ್ಷ್ಮಣರನ್ನು ಬೆದರಿಸಿದಳು. ಅಲ್ಲಿ ನಿಲ್ಲದೆ ನಿಮಿಷಮಾತ್ರದಲ್ಲಿ ಜನಸ್ಥಾನವೆಂಬ ಅರಣ್ಯಕ್ಕೆ ಬಂದಳು, ಖರನೇ ಮುಂತಾದ ತನ್ನ ಸೋದರರಾಗಿರುವ ಅಸುರರಿಗೆ ಕಾಣಿಸಿಕೊಂಡಳು, ಪುರುಷಾಶನರಿಗೆ ಪ್ರಾರಂಭದಲ್ಲಿ ರಾಮನಿಂದುಂಟಾಗಿರುವ ಪರಿಭವವನ್ನು ಮುಖದಿಂದ ಅರಿಕೆ ಮಾಡಿದಳು. ಆ ಮಹಾರಾಕ್ಷಸರು - ರೋಷಪರ ವಶರಾಗಿ, ರಾಮನನ್ನಿದಿರಿಸಲಾಶೆಯಿಂದ ಬಿರುಬಿರನೆ ಹೊರಟರು, ಇದಿರಿಗೆ ಆ ಮೂಳಿಯನ್ನು ಕಂಡುದೇ ಅವರಿಗೆ ಅಮಂಗಳ ಶಕುನವಾಗಿದ್ದಿತು.

ಉದಾಯುಧರಾಗಿ ಆಯೋಧನಕ್ಕೈತರುವ ಆ ಅಧಮರಾದ ಯಾತುಧಾನರನ್ನು ವೀರ್ಯಧನನಾದ ರಾಘವನು ಕಂಡನು, ವಿಜಯದಾಶೆ ಯನ್ನು ಜ್ಯಾಸಹಿತವಾದ ಧನುಸ್ಸಿನಲ್ಲಿಟ್ಟನು, ಸೀತಾರಕ್ಷಣೆಯಲ್ಲಿ ಲಕ್ಷ್ಮ ಣನನ್ನು ನೇಮಿಸಿ ಹೊರಟನು. ರಾಮನೊಬ್ಬನೇ ಇದ್ದುದು ದಿಟ, ರಕ್ಕ ಸರು ಸಾವಿರಾರುಮಂದಿಯೂ ಇದ್ದರು. ಆದರೆ- ರಣದಲ್ಲಿ ರಾಕ್ಷಸರೆಷ್ಟು ಮಂದಿಯಿದ್ದರೋ, ಅವರೊಳಗೆ ಪ್ರತಿಯೊಬ್ಬನಿಗೂ ಒಬ್ಬೊಬ್ಬ

ರಾಮನಾಗಿ ಇದಿರಿಸಿ ನಿಂತಿರುವಂತೆ ಶರವರ್ಷದಾರುಬೆಯಿಂದ ಕಾಣಿಸಿಕೊಂಡನು. ಮತ್ತು-ಸದ್ವೃತ್ತನೂ, ರಣಧೀರನೂ ಆಗಿರುವ ರಾಮನು- ದುರ್ಜನನಾದ ದೂಷಣಾಸುರನ ದೂಷಣೆಯನ್ನು ಸಹಿಸಲಿಲ್ಲ. ಆ ದೂಷಣನನ್ನೂ, ಹಾಗೆಯೇ ಖರತ್ರಿಶಿರರನ್ನೂ, ಶರಗಳಿಂದ ಸದೆಬಡಿಯುತೊಡಗಿದನು, ಕ್ರೂರಗಳಾದ ರಾಮಶರಸರ್ಪಗಳು —ರಾಕ್ಷಸರ ರಕ್ತಲೇಪವಿಲ್ಲದಂತೆ ಮೊದಲೇ ಪ್ರಾಣವಾಯುಗಳನ್ನು ಪಾನಮಾಡಿದುವು, ಬಳಿಕ ಆ ರಕ್ಕಸರ ವೈರಕುತವನ್ನಾದರೋ, ರಣಪಕ್ಷಿಗಳು ಕುಡಿದು ತಣಿದುವು. ರೌದ್ರಾವೇಶದಿಂದ ರಣರಂಗದಲ್ಲಿ ನಿಂತಿರುವ ರಾಮನ ಬಾಣಗಳ ಹೊಡೆತದಲ್ಲಿ, ಕುಣಿಯುತಲಿರುವ ತಲೆಯಿಲ್ಲದ ಮುಂಡಗಳು ಹೊರತು, ಮತ್ತಾವ ಪ್ರಾಣಿಯೂ ಇದಿರಿಗೆ ಕಾಣಬರಲಿಲ್ಲ ಇಂತು ಆ ರಾಕ್ಷಸರ ಪಡೆಯು - ರಾಮಶರವೃಷ್ಟಿಯಲ್ಲಿ ಮುಳುಗಿ, ಆಗಸದೊಳಗೆ ನೆರೆದಿರುವ ರಣಹದ್ದುಗಳ ವಿಶಾಲವಾದ ನೆಳಲಿನಲ್ಲಿ ಮರಳಿ ಎಚ್ಚರವಿಲ್ಲದಂತೆ ವೈಮರೆತು ಮಲಗಿತು. ತರುವಾಯ - ಮೊರದಾತೆ ಉಗುರುಗಳನ್ನುಳ್ಳವಳೆಂದು ಹೆಸರುವಾಸಿಯನ್ನು ಪಡೆದು ನಿಂತಿರುವ ಮೂಗುಹರಿಕೆಯಾದ ಶೂರ್ಪಣಖಿಯೊಬ್ಬಳೇ ಆ ಯುದ್ಧಭೂಮಿಯಲ್ಲಿ ಮಡಿದು ಬಿದ್ದಿರುವ ರಕ್ಕಸರ ಮರಣವಾರ್ತೆಯನ್ನು ರಾವಣನ ಬಳಿಗೆ ಕೊಂಡೊಯ್ಯಲು ದೂತಿಯಾಗಿದ್ದಳು.

ಬಳಿಕ ವೈಶ್ರವಣನ ತಮ್ಮನಾದ ರಾವಣನು - ತಂಗಿಗಾಗಿರುವ, ಭಂಗದಿಂದಲೂ, ಆಪ್ತಬಂಧುಗಳಾದ ಖರಾದಿಗಳ ಮರಣದಿಂದಲೂ, ರಾಮನು ತನ್ನ ಹತ್ತು ನೆತ್ತಿಗಳಮೇಲೆಯೂ ಹಜ್ಜೆಯನ್ನೂರಿದನೆಂದು ಭಾವಿಸಿದನು. ಕೂಡಲೆ ರೋಷದಿಂದ ಉರಿದೆದ್ದನು, ಕಾಡಿಗೆ ಬಂದನು, ಮಾರೀಚನನ್ನು ಕಂಡನು, ಹೇಮಮಯವಾದ ಮೃಗರೂಪವನ್ನು ತಾಳಿಸಿದನು, ರಾಮನನ್ನು ವಂಚಿಸಿದನು, ಸೀತೆಯನ್ನು ಅಪಹರಿಸಿದನು; ಜಟಾಯುವೆಂಬ ಗೃಧ್ರರಾಜನ ಕೋಟಲೆಯಿಂದ ಕ್ಷಣಕಾಲ ಅಡ್ಡಿಯನ್ನು ಪಡೆದಿದ್ದನು, ಆ ಪಕ್ಷಿಗೂ ಪಕ್ಷಪಾತವನ್ನೆಸಗಿದನು, ತನ್ನ ಪುರವನ್ನು ಕುರಿತು ತೆರಳಿದನು.

ಇತ್ತ ರಾಮುಲಕ್ಷ್ಮಣರು - ಸೀತೆಯುನ್ನು ಹುಡುಕುತ್ತಾ ಅಲ್ಲಲ್ಲಿ ಅಲೆದು ಬರುತಲಿದ್ದರು, ದಾರಿಯುಲ್ಲಿ ರೆಕ್ಕೆಗಳರಿದು ಕುಟುಕುಜೀವದಿಂದಿದ್ದ ಹಕ್ಕಿಯುನ್ನು ಕಂಡರು, ಆ ಪಕ್ಷಿರಾಜನು - ದಶರಥನಲ್ಲಿದ್ದ ಪ್ರೀತಿಯಿಂದ ಕಂಠಗತವಾದ ಪ್ರಾಣಗಳಿರುವಾಗಲೇ, ಸೀತೆಯುನ್ನು ರಾವಣನು ಅಪಹರಿಸಿದನೆಂದೂ, ತಾನು ಮಾಡಿದ ಸಾಹಸವನ್ನು ತನ್ನ ಮೆಯ್ಯ ಗಾಯುದಿಂದ ತಿಳಿಯತಕ್ಕುದೆಂದೂ, ತೊದಲು ನುಡಿಗಳಿಂದತಿಳಿಸಿ, ಮಿತ್ರ ಋಣದಿಂದಲೂ, ಪ್ರಾಣಗಳಿಂದಲೂ ಬಿಡಲ್ಪಟ್ಟನು. ರಾಮುಲಕ್ಷ್ಮಣರು ಧರ್ಮದಿಂದ ತಂದೆಯುಂತಿರುವ ಜಟಾಯುುವಿನ ಮುರಣದಿಂದ ನೂತನವಾದ ಪಿತೃಶೋಕದಂತೆ ಆ ದುಃಖವನ್ನೂ ಅನುಭವಿಸಿ, ತಂದೆಗೆಹೇಗೋ ಹಾಗೆ, ಆ ಗೃಧ್ರರಾಜನಿಗೂ ಅಗ್ನಿಸಂಸ್ಕಾರವೇ ಮೊದಲಾದ ಉತ್ತರ ಕ್ರಿಯೆಗಳನ್ನೆಲ್ಲ ಕ್ರಮುವಾಗಿ ಆಚರಿಸಿದರು. ಅಲ್ಲಿಂದ ಮುುಂದೆ ಬರುತ್ತಾ, ಇದಿರಿಸಿದ ಕಬಂಧನನ್ನು ವಧಿಸಿದರು, ಶಾಪದಿಂದ ಬಿಡುಗಡೆಯುನ್ನು ಹೊಂದಿ ಗಂಧರ್ವ ದೇಹವನ್ನು ಪಡೆದ ಆ ವಿರಾಧನ ಸಮುಪದೇಶದಿಂದ ಸಮಾನವ್ಯಸನಿಯಾಗಿರುವ ಕಪಿವರನಾದ ಸುಗ್ರೀವನೊಡನೆ ಮಾರುತಿಯಿಂದ ರಾಮುನಿಗೆಸಖ್ಯವು ಬೆಳೆಯಿತು.

ಬಳಿಕ ಮುಹಾವೀರನಾದ ರಾಮುನು - ಸುಗ್ರೀವನ ಅಣ್ಣನಾದ ವಾಲಿಯುನ್ನು ಕೊಂದನು, ಬಹುಕಾಲದಿಂದ ಬಯುಸುತಲಿದ್ದ ಅವನ ಸ್ಥಾನದಲ್ಲಿ, ಸುಗ್ರೀವನನ್ನು, ಒಂದು ಧಾತುವಿನೆಡೆಯುಲ್ಲಿ ಬೇರೊಂದು ಧಾತುವನ್ನು ಆದೇಶಿಸುವಹಾಗೆ, ವಾಲಿಕಾರ್ಯವನ್ನು ನೆರವೇರಿಸುವ ರೀತಿಯುಲ್ಲಿ ನೆಲೆಗೊಳಿಸಿದನು. ಕೂಡಲೆ ಕಪಿರಾಜನಾದ ಸುಗ್ರೀವನು - ಸೀತೆಯುನ್ನು ಹುಡುಕಿ, ಸುದ್ದಿಯುನ್ನು ತರುವಂತೆ, ನಾಲ್ಕುದಿಕ್ಕಿಗೂ ದೂತರನ್ನು ಅಟ್ಟಿದನು, ಜಾನಕಿಯು ಅಗಲಿಕೆಯಿಂದ ಆರ್ತನಾಗಿರುವ ರಾಮುನ ಹಂಬಲಿಕೆಗಳಂತೆ, ಹರಿಗಳೆಲ್ಲಎಲ್ಲೆಲ್ಲಿಯುೂ ಅಲೆಯುತೊಡಗಿದರು. ಅವರೊಳಗೆ ಅಂಗದ, ಹನುಮು, ನೀಲ, ನಳ, ಜಾಂಬವಂತನೇ ಮೊದಲಾದವರು - ತೆಂಕಣ ಕಡಲತಡಿಗೈತಂದರು, ಜಟಾಯುುವಿನ ಅಣ್ಣನಾದ ಸಂಪಾತಿಯಿಂದ ಸೀತೆಯುು ರಾವಣನ ಮುನೆಯುಲ್ಲಿರುವಳೆಂಬ ಸುದ್ದಿಯುು ತಿಳಿಯಿತು,ಜಾಂಬವನ ಪ್ರೋತ್ಸಾಹದಿಂದ ಮಾರುತಿಯುು-ಮುಮುತೆಯುನ್ನು

ತೊರೆದ ಯೋಗಿಯು ಸಂಸಾರವನ್ನು ದಾಟುವಂತೆ, ಸಾಗರವನ್ನು ದಾಟಿದನು. ಲಂಕೆಯನ್ನು ಹೊಕ್ಕನು. ರಾವಣಾಲಯದ ಅಶೋಕ ವನಕ್ಕೆ ಬಂದನು. ವಿಷದ ಮೂಲಿಕೆಗಳಿಂದ ಆವರಿಸಲ್ಪಟ್ಟಿರುವ ಸಂಜೀವಿನೀ ಲತೆಯಂತೆ, ರಕ್ಕಸರಿಂದ ಬಳಸಲ್ಪಟ್ಟಿರುವ ಸೀತೆಯನ್ನು ಕಂಡನು. ತಾನು ರಾಮದೂತನೆನ್ನಲಿಕ್ಕೂ, ರಾಮನು ಕುಶಲದಿಂದಿರುವನೆನ್ನಲಿಕ್ಕೂ ಜ್ಞಾಪಕವಾಗಿ, ಜಾನಕಿಯು ಆನಂದಬಾಷ್ಪಬಿಂದುಗಳಿಂದ ಇದಿರುಗೊಳ್ಳಲ್ಪಡುವಂತಿರುವ ರಾಮನಾಮಾಂಕಿತದ ಮುದ್ರಿಕೆಯನ್ನು ಆಕೆಗೆ ಕೊಟ್ಟನು. ಪ್ರಿಯವಲ್ಲಭನ ಕುಶಲ ವೃತ್ತಾಂತಗಳಿಂದ ಆಕೆಯನ್ನು ಸುಖಗೊಳಿಸಿದನು. ಅಕ್ಷಕುಮಾರನನ್ನು ಕೊಂದು ಕೊಬ್ಬಿದನು. ಹಗೆಯಾದ ಇಂದ್ರಾರಿಯ ನಿಗ್ರಹವನ್ನು ಕ್ಷಣಕಾಲಮಾತ್ರ ಸಹಿಸಿದ್ದು, ಲಂಕಾ ನಗರಿಯನ್ನು ಉರಿಸಿದನು. ಅದರಿಂದ ಕೃತಕೃತ್ಯನಾದ ಮಾರುತಿಯು ಹಿಂದಿರುಗಿದನು, ಸೀತೆಯು ಕೊಟ್ಟಿದ್ದ ಚೂಡಾರತ್ನವನ್ನು ಶ್ರೀರಾಮನಿಗೆ ಒಪ್ಪಿಸಿದನು, ಜಾನಕಿಯ ಹೃದಯವೇ ಮೂರ್ತಿವತ್ತಾಗಿ ರಾಮದರ್ಶನ ಕುತೂಹಲದಿಂದ ಇದಿರಿಗೆ ಬಂದಂತಿದ್ದಿತು, ರಾಮನಾ ಚೂಡಾರತ್ನವನ್ನು ತನ್ನ ಎದೆಯಮೇಲಿಟ್ಟುಕೊಂಡನು, ಕೂಡಲೇ ಅರೆಮುಗಿದ ಕಣ್ಣುಗಳುಳ್ಳವನಾದನು, ಪ್ರಿಯಪತ್ನಿಯನ್ನೇ ಪ್ರತ್ಯಕ್ಷದಲ್ಲಿ ಕಂಡವನಂತೆ ಆನಂದವನ್ನು ಹೊಂದಿದನು. ಮತ್ತು - ಪ್ರಿಯಳ ಸುದ್ದಿಯನ್ನೆಲ್ಲ ಕಪಿವರನಮೂಲಕವೇ ಕೇಳಿದನು, ಜಾನಕಿಯನ್ನು ಪಡೆಯಬೇಕೆಂಬ ಪ್ರಬಲವಾದ ಕುತೂಹಲದಿಂದ ಲಂಕೆಯನ್ನು ಬಳಸಿರುವ ಮಹೋದಧಿಯನ್ನು ಕಂದಕದಂತೆ ಅತ್ಯಲ್ಪವಾದುದನ್ನಾಗಿ ಭಾವಿಸಿದನು, ಅರಿಯನ್ನು ಇರಿಯಲು ಪ್ರಯಾಣವನ್ನು ಬೆಳಸಿದನು, ರಾಮನನ್ನು ಹಿಂಬಾಲಿಸಿರುವ ಕಪಿಗಳ ಪಡೆಯು - ನೆಲದಲ್ಲಿ ಮಾತ್ರವಲ್ಲದೆ ಆಗಸದಲ್ಲಿಯೂ ಎಡೆಸಾಲದೆ ಬಲು ತೊಂದರೆಯಿಂದ ನಡೆಯುತಲಿದ್ದಿತು, ಕಡಲತಡಿಗೈತಂದನು, ಬೀಡುಬಿಟ್ಟಿತು, ರಾವಣ ರಾಜ್ಯಲಕ್ಷ್ಮಿಯು - ವಿಭೀಷಣನ ಬುದ್ಧಿಯನ್ನು ಹೊಕ್ಕಳು, ಪ್ರೀತಿಯಿಂದ ಪ್ರೇರಿಸಿದಳು, 'ಕೇಡಿಗೆ ದುರ್ಬುದ್ಧಿ' ಎಂಬಂತೆ ರಾವಣನ ದುರ್ಮತಿಯು ವಿಭೀಷಣನ ಹಿತೋಕ್ತಿಗೆ ಎಡೆಗುಡಲಿಲ್ಲ. ಕಾಮಬಾಣದಿಂದ ಸರಂಧ್ರವಾಗಿದ್ದ

ದಶಗಳನ ಚಿತ್ತದಲ್ಲಿ ವಿಭೀಷಣನ ಹಿತೋಪದೇಶಾಮೃತವು ನಿಲ್ಲದೆ ಹೋಯಿತು, ಅಣ್ಣನಿಂದ ತಿರಸ್ಕಾರವನ್ನು ಹೊಂದಿದನು, ಅಲ್ಲಿಂದೆದ್ದನು, ಪಾರಾವಾರದ ತೀರದಲ್ಲಿ ನೆಲಸಿರುವ ಸರ್ವಲೋಕ ಶರಣ್ಯನಾದ ರಘುನಂದನನನ್ನು ಅಭಯಾರ್ಥಿಯಾಗಿ ಮರೆಹೊಕ್ಕನು.

ಶರಣಾಗತವತ್ಸಲನಾದ ರಾಘವನು - ರಾಕ್ಷಸ ಸಾಮ್ರಾಜ್ಯವನ್ನು ಆಗಲೇ ಅಲ್ಲಿಯೇ ವಿಭೀಷಣನಿಗೊಪ್ಪಿಸಿದನು. ಸಕಾಲದಲ್ಲಿ ವಿನಿಯೋಗಿಸಿದ ಸುನೀತಿಯೇ ಸರಸವಾಗಿ ಸಫಲವಾಗುವುದು. ಬಳಿಕ ರಾಮಚಂದ್ರನು - ಲವಣೋದಧಿಯಲ್ಲಿ ಕಪಿಗಳಿಂದ ಸೇತುವೆಯನ್ನು ಕಟ್ಟಿಸಿದನು, ನಾರಾಯಣನು ಪವಳಿಸಲೆಂದು ರಸಾತಲದಿಂದ ಆದಿಶೇಷನು ಮೇಲಕ್ಕೆ ತೇಲಿಬಂದಿರುವನೆಂಬಂತೆ ಕಂಗೊಳಿಸುತಲಿದ್ದಿತು.

ತರುವಾಯ- ಆ ಸೇತುವೆಯ ಹಾದಿಯಿಂದಲೇ ಕಪಿಗಳ ಪಡೆಯೊಡನೆ ಜಲನಿಧಿಯನ್ನು ದಾಟಿದನು, ಹರಿಸೇನೆಯು - ರಾಮಾಜ್ಞೆಯಿಂದ ತತ್‌ಕ್ಷಣದಲ್ಲಿಯೇ ಲಂಕೆಯನ್ನು ಮುತ್ತಿತು, ರಾವಣ ರಾಜಧಾನಿಗೆ ಬೇರೊಂದು ಚಿನ್ನದ ಕೋಟೆಯನ್ನು ಕಟ್ಟಿರುವಂತೆ ಕಾಣಿಸಿತು. ಕಪಿರಾಕ್ಷಸರಿಗೆ ಘೋರವಾದ ರಣವು ಆರಂಭವಾಯಿತು, ಸೇನಾಕಲಕಲವು- ಒಂದುಕಡೆ ರಾಘವನಿಗೆ ಜಯವಾಗಲೆಂದೂ, ಮತ್ತೊಂದುಕಡೆ ರಾವಣನಿಗೆ ಜಯವಾಗಲೆಂದೂ ನಾಲ್ಕುದಿಕ್ಕಿನಲ್ಲಿಯೂ ಘೋಷಿಸುತಲಿದ್ದಿತು. ಆ ಮಹಾಯುದ್ಧದಲ್ಲಿ- ಮರಗಳ ಪೆಟ್ಟಿನಿಂದ ಪರಿಘಾಯುಧಗಳು ತುಂಡು ತುಂಡಾಗುತಲಿದ್ದುವು, ಬಂಡೆಗಳ ಪೆಟ್ಟಿನಿಂದ ಮುದ್ಗರಗಳು ಪುಡಿಪುಡಿಯಾಗಿ ಬೀಳುತಲಿದ್ದುವು, ಕಪಿಗಳುಗುರಿನ ಗಾಯಗಳು ಶಸ್ತ್ರಪಾತಗಳನ್ನು ಮೀರಿದ್ದುವು, ಬೆಟ್ಟಗಳ ಹೊಡೆತದಿಂದ ಆನೆಗಳು ಉರುಳುತಲಿದ್ದುವು.

ಇಂತಹ ಮಹಾಘೋರ ಸಮರವು ನಡೆಯುತಲಿರುವಾಗ ವಿದ್ಯುಜ್ಜಿಹ್ವನೆಂಬ ಕ್ರೂರರಾಕ್ಷಸನು - ಕತ್ತರಿಸಿ ತುಂಡಾಗಿರುವ ರಾಮನ ಶಿರವನ್ನು ಕೊಂಡುಹೋಗಿ ಸೀತೆಯಮುಂದಿಟ್ಟು ಹೊರಟುಹೋದನು, ಜಾನಕಿಯ ಜೀವಿತವು ತತ್‌ಕ್ಷಣವೇ ಹಾರಿಹೋದಂತಾಯಿತು, ಕಣ್ಣುಗಳು ಮುಚ್ಚಿಹೋದುವು, ಹಾ ! ರಾಮಾ ಎಂದು ಎರಡು ಕೈಗಳನ್ನೂ.

ಆ ತಲೆಯಮೇಲೆ ಹಾಕಿ, ನೆಲವೊಗನಾಗಿ ಮೈಮರೆತು ಮಲಗಿದಳು, ಕಣ್ಣೀರಿನ ಕಾಲುವೆಯಲ್ಲಿ ಆ ರುಂಡವು ಮುಳುಗಿತು, ರಾಮನ ಯುದ್ಧ ಫಲವು ಕೊನೆಗಾಣುವ ಸಮಯವು ಬಂದಿತು, ಸೀತೆಯಲ್ಲಿ ಪಕ್ಷಪಾತಿನಿಯಾಗಿದ್ದ ವಿಭೀಷಣನ ಮಗಳಾದ ತ್ರಿಜಟೆಯೆಂಬುವವಳು-ಎಲೆ ತಾಯೆ ! ಇದು ವಿದ್ಯುಜ್ಜಿಹ್ವನ ಮಾಯಾಕೌಶಲವಲ್ಲದೆ ಬೇರಲ್ಲ ಎಂದು ಹೇಳಿ, ಸೀತೆಯನ್ನು ಬದುಕಿಸಿದಳು. . ವೈದೇಹಿಯು - ತನ್ನ ಪತಿಯು ಸುಖವಾಗಿ ಜೀವಿಸಿರುವನೆಂದರಿತು, ಪ್ರಾಣದೊಂದಿಗೆ ಎಚ್ಚತ್ತರೂ, ರಾಮನು ಸತ್ತನೆಂಬುದನ್ನು ತಿಳಿದೂ ಮೊದಲುಬದುಕಿದ್ದೆನಲ್ಲಾ ಎಂದು ಬಲು ನಾಚಿಕೆಗೊಂಡಳು.

ಇತ್ತ ರಣಭೂಮಿಯಲ್ಲಿ - ಗರುಡನು ಬರುವವರೆಗೂ ರಾಮಲಕ್ಷ್ಮಣರಿಗೆ ಮೇಘನಾದನ ಸರ್ಪಾಸ್ತ್ರದಿಂದ ಉಂಟಾಗಿದ್ದ ಕ್ಷಣಕಾಲದ ಮೂರ್ಛೆಯು ಸ್ವಪ್ನದಲ್ಲಿ ನಡೆದಂತೆ ಇದ್ದಿತು. ರಾವಣನೂ ರಣಕ್ಕೈತಂದನು, ಶಕ್ತ್ಯಾಯುಧದಿಂದ ಸೌಮಿತ್ರಿಯ ಎದೆಗಿಟ್ಟನು, ಅದರಿಂದ ರಾಮನು - ಪೆಟ್ಟುಬೀಳದಿದ್ದರೂ ತನ್ನ ಎದೆಯೇ ಒಡೆದುಹೋದಂತೆ ಶೋಕಸಾಗರದಲ್ಲಿ ಮುಳುಗಿದನು. ಮಾರುತಿಯು - ನಿಮಿಷಮಾತ್ರದಲ್ಲಿ ಸಂಜೀವಿನಿಯನ್ನು ತಂದನು, ಲಕ್ಷ್ಮಣನು ವ್ಯಥೆಯನ್ನು ತೊರೆದೆದ್ದನು, ಕೂಡಲೆ ಮರಳಿ ಲಂಕಾ ರಾಕ್ಷಸನಾರಿಯರ ಪ್ರಲಾಪೋದಯಕ್ಕೆ ಶರಗಳಿಂದ ಆಚಾರ್ಯನ ಕರ್ಮವನ್ನು ಮಾಡಿದನು. ಮತ್ತು - ಶರತ್ಕಾಲವು - ಮೇಘದ ನಾದವನ್ನೂ, ಇಂದ್ರಚಾಪವನ್ನೂ ಹೇಗೋಹಾಗೆ, ಮೇಘನಾದನ ನಾದವನ್ನು ಅವನ ಚಾಪದೊಂದಿಗೆ ಸ್ವಲ್ಪವೂ ಉಳಿಯದಂತೆ ಕೊನೆಗಾಣಿಸಿದನು.

ಕಪಿಸಾರ್ವಭೌಮನಾದ ಸುಗ್ರೀವನು - ರಣಕ್ಕೈತಂದ ಕುಂಭಕರ್ಣನಿಗೆ ಅವನ ತಂಗಿಗೆ ಸಮಾನವಾದ ಸಂಪದವನ್ನಿತ್ತನು. ಆಗಲಾತನು - ಒಂದು ಭಾಗದಲ್ಲಿ ಉಳಿಯ ಪೆಟ್ಟನ್ನು ತಿಂದಿರುವ ಮಣಿಶಿಲೆಯನ್ನೊಳಗೊಂಡ ದೊಡ್ಡ ಬೆಟ್ಟದಂತೆ ಬೆಳಗುತ್ತಾ ರಾಮನನ್ನು ಇದಿರಿಸಿದನು. “ ಛೀ ! ಸುಖವಾಗಿ ಪವಳಿಸಿದ್ದ ನಿನ್ನನ್ನು ನಿಮ್ಮಣ್ಣನು ಅಕಾಲದಲ್ಲಿ

ಎಚ್ಚರಿಸಿದುದು ಬಹಳ ಅನ್ಯಾಯ, ಮತ್ತು ವ್ಯರ್ಥ ” ಎಂದು ಕನಿಕರದಿಂ ದಲೋ ಎಂಬಂತೆ ರಾಮಬಾಣಗಳು-ಅವನನ್ನು ಮರಳಿ ಯಾರಿಂದಲೂ ಎಚ್ಚರಗೊಳಿಸಲಾಗದ ದೀರ್ಘನಿದ್ರೆಯಲ್ಲಿ ಮಲಗಿಸಿದುವು. ಆಗ - ವಾನರಕೋಟಿಯಲ್ಲಿ ಬಂದು ಬೀಳುತಲಿರುವ ರಕ್ಕಸರ ದಳಕ್ಕೆ, ರಾಕ್ಷಸ ರಕ್ತಪ್ರವಾಹದಲ್ಲಿ ಬಂದು ಬೀಳುತಲಿರುವ ಸೇನಾಧೂಳಿಯ ಪಾಡುಂ ಟಾಯಿತು.

ಬಲವೆಲ್ಲ ಬರಿದಾಯಿತು, ಬವರಕ್ಕೆ ತಕ್ಕವರಿಲ್ಲವಾದರು, ಪೌಲ ಸ್ತ್ಯನೇ ಮರಳಿ ಮನೆಯಿಂದ ಕಾಳಗಕ್ಕೈತಂದನು. ಈಗಲೀ ಜಗತ್ತು ಅರಾವಣವಾಗಬೇಕು, ಅಥವಾ ಅರಾಮವಾಗಬೇಕು ಎಂಬುದೇ ಅವನ ದೃಢಸಂಕಲ್ಪವಾಗಿದ್ದಿತು. ಸಮರಾಂಗಣದಲ್ಲಿ ರಾಮನು ಪದಾತಿಯಾ ಗಿಯೂ, ರಾವಣನು ರಥಿಕನಾಗಿಯೂ ನಿಂತರು. ಹರಿಹಯನಿಗೆ ಸೈರಿಸ ಲಿಲ್ಲ. ಕೂಡಲೆ ಹರಿದಶ್ವಯುಗ್ಮದಿಂದೊಡಗೂಡಿದ ತನ್ನ ರಥವನ್ನು ರಾಘ ವನಿಗೆ ಕಳುಹಿಸಿಕೊಟ್ಟನು. ವ್ಯೋಮಗಂಗೆಯಮೇಲಣ ಗಾಳಿಯಿಂದ ಧ್ವಜಪಟವು ಅಲುಗುತಲಿದ್ದಿತು, ರಥವು ರಣಭೂಮಿಗಿಳಿಯಿತು, ರಾಘ ವನು - ಇಂದ್ರಸಾರಥಿಯ ತೋಳನ್ನವಲಂಬಿಸಿ, ಜಯವನ್ನು ಸೂಚಿಸು ತಲಿರುವ ಆಸ್ಯಂದನವನ್ನೇರಿದನು. ಅಸುರಾಸ್ತ್ರಪಾಶವು - ಎಲ್ಲಿ ಕನ್ನೈದಿ ಲೆಯ ಹೂವಿನ ರೇಕಿನಂತೆ ಭಂಗವನ್ನು ಪಡೆಯುತದೆಯೋ, ಅಂತಹ ಮಹೇಂದ್ರನ ವಜ್ರಕವಚವನ್ನು ಮಾತಲಿಯು ರಾಮನಿಗೆ ತೊಡಿಸಿದನು.

ಬಹುಕಾಲಕ್ಕೆ ಒಬ್ಬರನ್ನೊಬ್ಬರು ಇದಿರ್ಗೊಂಡು, ತಂತಮ್ಮ ಪರಾಕ್ರಮವನ್ನು ತೋರುವ ಅವಸರವು ಒದಗಿತು. ಇದರಿಂದ ರಾಮ ರಾವಣ ಯುದ್ಧವು ಸಫಲತೆಯನ್ನು ಪಡೆಯುವಂತಿದ್ದಿತು. ದಶಗಳನಿಗೆ ಅದುವರೆಗೆ ಮಂದಿಯೆಲ್ಲ ಸಂದುಹೋಗಿದ್ದಿತು. ಏಕಾಂಗಿಯಾಗಿಯೇ ನಿಂತಿದ್ದನು, ಆದರೂ-ತಲೆಗಳೂ, ತೋಳುಗಳೂ, ಕಾಲುಗಳೂ ಹೇರಳ ವಾಗಿದ್ದುದರಿಂದ ತನ್ನ ತಾಯಿಯ ಮನೆಯಲ್ಲಿ ಬಂಧುಬಳಗಗಳಿಂದ ಕೂಡಿ ರುವವನಂತಿದ್ದನು. ರಾವಣನು ಸಾಧಾರಣನಲ್ಲ, ಲೋಕಪಾಲರನ್ನೆಲ್ಲ ಗೆದ್ದವನು. ತನ್ನ ಶಿರಗಳಿಂದ ಶಂಕರನನ್ನು ಆರಾಧಿಸಿದವನು, ಕೈಲಾಸ ವನ್ನೂ ಕೈಗಳಿಂದಲ್ಲಾಡಿಸಿ, ಶೌರ್ಯದಿಂದ ಮೆರೆದವನು, ಇಂಥವನನ್ನು

ನೋಡಿ, ರಾಮನು - ಗುಣಪಕ್ಷಪಾತಿಯಾದುದರಿಂದ, ಹಗೆಯಾಗಿದ್ದರೂ ತನ್ನ ಮನದೊಳಗೆ ಬಹಳವಾಗಿ ಕೊಂಡಾಡಿದನು. ತನ್ನವರನ್ನೆಲ್ಲ ಇರಿದುರುಳಿಸಿ, ಹಗೆತನವನ್ನು ತೋರುತಲಿರುವ ರಾಮನನ್ನು ಕಂಡಕೂಡಲೆ, ರಾವಣನಿಗೆ ಹೇರಳವಾದ ಸಿಟ್ಟುಹತ್ತಿತು. ಸೀತಾಲಾಭವನ್ನು ಸೂಚಿಸುತ ಅದಿರುತಲಿರುವ ರಾಮನ ಬಲದೋಳಿನಲ್ಲಿ ಕೂರಂಬುಗಳನ್ನು ನಟ್ಟನು. ದಾಶರಥಿಯು - ದಶಗಳನ ಕೃತ್ಯದಿಂದ ಮೃತ್ಯುವಿನಂತೆ ರೌದ್ರಾವೇಶಪರನಾಗಿ ಆಶುಗವನ್ನೆಸೆದನು. ಆ ಅಸ್ತ್ರವು - ಆಶುಗಮನದಿಂದ ದಶವದನನ ಹೃದಯವನ್ನು ಭೇದಿಸಿ, ಪಾತಾಳವಾಸಿಗಳಿಗೂ ಪ್ರಿಯವನ್ನು ತಿಳಿಸಲೆಳಸಿರುವುದೆಂಬಂತೆ ಭೂಮಿಯನ್ನು ಹೊಕ್ಕಿತು. ಮಾತಿನಿಂದ ಮಾತನ್ನೂ, ಶರದಿಂದ ಶರವನ್ನೂ ಕತ್ತರಿಸುತ, ಮುಯ್ಯಿಗೆ ಮುಯ್ಯನ್ನು ಮಾಡಿ ತೋರುತಲಿರುವ ಆ ರಾಮರಾವಣರಿಗೆ, ಸಭಾಮುಖದಲ್ಲಿ ಕುಳಿತು, ಕೋಟಿಪ್ರತಿಕೋಟಿಗಳನ್ನು ಉದಹರಿಸುತಲಿರುವ ವಾದಿಪ್ರತಿವಾದಿಗಳಿಗೆ ಹೇಗೋಹಾಗೆ, ಪರಸ್ಪರ ಜಯಸಂಭ್ರಮವು ಹೆಚ್ಚುತಲಿದ್ದಿತು ದಾಶರಥಿ ದಶಗಳರ ನಡುವೆ ನಿಂತಿರುವ ಜಯಲಕ್ಷ್ಮಿಯು - ರಾಮನು ಶರವನ್ನು ತೊಡುವಾಗ ರಾಮನಕಡೆಗೂ, ರಾವಣನು ಅಂಬನ್ನೆಸೆವಾಗ ಅವನಕಡೆಗೂ ಬಾಗುತ, ಮದವೇರಿದಾನೆಗಳಹೋರಾಟದಲ್ಲಿ ಹೇಗೋಹಾಗ ಮಧ್ಯಸ್ಥಳಾಗಿರುತ್ತಿದ್ದಳು. ರಾಮಶರಪ್ರಯೋಗದಲ್ಲಿ ಅಮರರೂ, ರಾವಣ ಬಾಣಪಾತದಲ್ಲಿ ಅಸುರರೂ ಪುಷ್ಪವೃಷ್ಟಿಯನ್ನು ವರ್ಷಿಸುತಲಿದ್ದರು, ರಾಮರಾವಣ ಶರವೃಷ್ಟಿಗಳೇ ಸಹಿಸದೆ ಆ ಪುಷ್ಪವೃಷ್ಟಿಗಳನ್ನು ವಾರಿಸುತಲಿದ್ದವು.

ಬಳಿಕ ರಾವಣನು - ತನ್ನ ದಿಗ್ವಿಜಯದಲ್ಲಿ ಯಮನಿಂದ ಪಡೆದ, ಕೂಟಶಾಲ್ಮಲಿಯೆಂಬಾಯುಧದಂತಿರುತ ಮೊನೆಯಾದ ಉಕ್ಕಿನ ಮೊಳೆಗಳಿಂದ ತುಂಬಿರುವ, ಶತಘ್ನಿಯೆಂಬ ಮಹಾಕ್ರೂರವಾದ ಆಯುಧವನ್ನು ಹಗೆಯಾದ ರಾಮನಮೇಲೆ ಎಸೆದನು. ರಕ್ಕಸರೆಲ್ಲ ಕೇಕೆಹಾಕತೊಡಗಿದರು, ರಾಮನು - ಅರ್ಧಚಂದ್ರಾಕಾರವಾದ ಮುಖವನ್ನೊಳಗೊಂಡಿರುವ ಬಾಣಗಳಿಂದ ಹೊಡೆದು, ಮಧ್ಯಮಾರ್ಗದಲ್ಲಿಯೇ ಆ ಶತಘ್ನಿಯನ್ನು, ಅಸುರರ ಆಶೆಯೊಂದಿಗೆ, ಬಾಳೆಯ ಕಂಬವನ್ನು ಕತ್ತರಿಸುವಂತೆ

ಸುಲಭವಾಗಿ ತುಂಡುಮಾಡಿ ಕೆಡಹಿದನು. ಧನುರ್ಧರರೊಳಗೆ ಅದ್ವಿತೀಯ ನೆನಿಸಿರುವ ರಾಮನು -ಕೂಡಲೆ ತನ್ನ ಹೃದಯದಲ್ಲಿ ನಟ್ಟಿರುವ ಸೀತಾ ಶೋಕವೆಂಬ ಶಲ್ಯವನ್ನು ಕಿತ್ತೆಸೆಯತಕ್ಕ ಮಹಾಔಷಧವೆನಿಸಿದ ಬ್ರಹ್ಮಾ ಸ್ತ್ರವನ್ನು ಹಗೆಯಮೇಲೆ ಪ್ರಯೋಗಿಸಲು ಬಿಲ್ಲಿನಲ್ಲಿ ಅಭಿಮಂತ್ರಿಸಿದನು. ಆಕಾಶವಲ್ಲಿ ಬಹುವೇಗದಿಂದ ಹೊರಟು, ಉರಿಯುತಲಿರುವ ಮುಖಗಳು ಳ್ಳುದಾಗಿರುವ ಆ ಬ್ರಹ್ಮಾಸ್ತ್ರವು - ವಿಷಜ್ವಾಲೆಗಳನ್ನು ಕಾರುವಂತೆ ನೂರುಪ್ರಕಾರವಾಗಿ ಹೆಡೆಗಳನ್ನು ಹರಡಿರುವ ಮಹಾಶೇಷನಹಾಗೆ ಬೆಳ ಗುತಲಿದ್ದಿತು ಅಗಸ್ತ್ಯ ಮಂತ್ರಪ್ರಭಾವದಿಂದ ಅಪರಿಮಿತ ಸಾರವ ನ್ನೊಳಗೊಂಡಿದ್ದ ಆ ಅಸ್ತ್ರವು - ಎಂದೂ ಗಾಯದ ನೋವನ್ನು ಅನುಭವಿ ಸದಿದ್ದ ಆ ರಾವಣನ ಶಿರಗಳ ಸಾಲನ್ನು, ಈಗಲೂ ವ್ರಣದವೇಧೆಯನ್ನು ಅರಿಯದಿರುವಂತೆಯೇ ನಿಮಿಷಮಾತ್ರದಲ್ಲಿ ಇಳುಹಿ, ರಣಲಕ್ಷ್ಮಿಗೆ ಅರ್ಪಿ ಸಿತು. ರಾಕ್ಷಸೇಂದ್ರನ ಶರೀರದಿಂದ ರಣಭೂಮಿಗುರುಳುತಲಿರುವ ಶಿರ ಗಳ ಪರಂಪರೆಯು - ಕೊಳದ ಜಲದಲ್ಲಿ ಅಲೆಗಳಿಂದ ಸಾಲಾಗಿ ಕಾಣಬ ರುವ ಬಾಲಸೂರ್ಯನ ಪ್ರತಿಬಿಂಬಗಳಂತೆ ಕಂಗೊಳಿಸುತಲಿದ್ದಿತು. ರಾವ ಣನ ತಲೆಯ ಬುರುಡೆಗಳು ರಣಾಂಗಣದಲ್ಲಿ ಬಿದ್ದುರುಳಿದ್ದರೂ, ಬ್ರಹ್ಮನ ವರಪ್ರದಾನದ ಶಂಕೆಯಿಂದ ಮೂರ್ಧಗಳು ಮರಳಿ ಎಲ್ಲಿ ಮೊಳೆಯು ವುವೋ ಎಂದು, ಬಹಳ ಹೊತ್ತಿನವರೆಗೂ ಅವನ ಮರಣದಲ್ಲಿ ಅಮರರ ಮನವು ಸಂಪೂರ್ಣವಾದ ನಂಬುಗೆಯನ್ನು ಪಡೆಯಲಿಲ್ಲ.

ತರುವಾಯ - ಲೋಕಕಂಟಕನಾಗಿದ್ದ ರಾವಣನ ಸಂಹಾರದಿಂದ ಸಂತುಷ್ಟರಾದ ಸುರರು - ಸಮೀಪಿಸಿರುವ ರಾಜ್ಯಾಭಿಷೇಕದ ಕಂಕಣ ಬಂಧವನ್ನೊಳಗೊಂಬ ಮಣಿಕಟ್ಟಿನಿಂದ ಮನೋಹರವಾದ ರಾಘವನ ಶಿರದಮೇಲೆ ಕಲ್ಪತರು ಕುಸುಮವೃಷ್ಟಿಯನ್ನು ವರ್ಷಿಸಿದರು. ಕಪೋ ಲಗಳಲ್ಲಿ ಸಂಚರಿಸುವುದರಿಂದ ಮದೋದಕ ಭಾರವನ್ನಾಂತ ರೆಕ್ಕೆಗಳಿಂದ ಬೆಳಗುತಲಿರುವ ದುಂಬಿಗಳು - ದಿಕ್ಪಾಲರ ದಿಗ್ಗಜಗಳ ಗಂಡಸ್ಥಲಗಳನ್ನು ಬಿಟ್ಟು ಸುವಾಸನೆಯಿಂದ ಸೆಳೆಯಲ್ಪಟ್ಟು, ಮಂಗಳನಾದದಿಂದೊಡಗೂಡಿ, ಹೂವಿನಮಳೆಯನ್ನನುಸರಿಸಿದ್ದುವು.

ದಶರಥನಾದರನು - ಶರಾಸನದ ಮೌರ್ವಿಯನ್ನು ಇಳಿಸಿದನ್ನು ದೇವತೆಗಳ ಕಾರ್‍ಯಭಾರವನ್ನು ನಿರ್ವಹಿಸಿದುದಾಯಿತು, ಸುರೇಂದ್ರಸೂತನು - ರಾವಣ ನಾಮಾಂಕಿತದ ಶರಗಳಿಂದೊಡಗೂಡಿರುವ ಧ್ವಜಪಟದಿಂದಲೂ, ಉತ್ತಮಾಶ್ವಗಳಿಂದಲೂ ಬೆಳಗುತಲಿರುವ ರಥದಿಂದ ಸಹಿತನಾಗಿ, ರಾಮನ ಅನುಮತಿಯನ್ನು ಪಡೆದು, ಸುರಲೋಕವನ್ನು ಕುರಿತು ಹೊರಟನು.

ಇತ್ತ ರಾಘವನು - ಶತ್ರುಶೇಷವಿಲ್ಲದಂತೆಸಗಿ, ಲಂಕೆಯನ್ನು ನಿಶ್ಶಂಕವಾದುದನ್ನಾಗಿ ಮಾಡಿದನು ವಿಭೀಷಣನು ಭಕ್ತಿ ಭಾವದಿಂದ ಪತಿವ್ರತಾಶಿರೋಮಣಿಯಾದ ಸೀತೆಯನ್ನು ಕರೆತಂದನು. ರಾಮನನುಮತಿಯಂತೆ, ಜಾನಕಿಯು ಅಗ್ನಿಪ್ರವೇಶದಿಂದ ಪರಿಶುದ್ಧಳೆನಿಸಿ. ಸರ್ವಮಾನ್ಯಳಾದಳು. ಬಳಿಕ ದಾಶರಥಿಯು - ಲಂಕಾಸಾಮ್ರಾಜ್ಯದಲ್ಲಿ ಅಭಿಷಿಕ್ತನಾದ ವಿಭೀಷಣನಿಂದಲೂ, ಸೂರ್‍ಯಸುತ ಸೌಮಿತ್ರಿಯರಿಂದಲೂ ಸಹಿತನಾಗಿ,ಭುಜಬಲದಿಂದ ಗೆದ್ದ ಪುಷ್ಪಕ ವಿಮಾನವನ್ನು ಧರ್ಮಪತ್ನಿಯೊಡನೆ ಏರಿ, ಸುಖಸಂಪದಗಳನ್ನು ಪಡೆದ ಕಪಿಸೇನೆಯೊಂದಿಗೆ ಅಯೋಧ್ಯಾ ನಗರವನ್ನು ಕುರಿತು ಸುಖಪ್ರಯಾಣವನ್ನು ಬೆಳೆಯಿಸಿದನು.

— ಇಂತು ರಾವಣವಧೆಯೆಂಬ ಹನ್ನೆರಡನೆಯ ಅಧ್ಯಾಯಂ —

## —ಹದಿಮೂರನೆಯ ಅಧ್ಯಾಯಂ—

ಸೂಚನೆ॥ ಅಡವಿಯ ಸೊಬಗಂ ರಾಮಂ ।
ಸಡಗರದಿಂ ದಧ್ರುಯಾನ ದರಸಿಗೆ ಪೇಳ್ದಂ ॥
ಕಡು ಸಂತಸದಿಂ ದಗ್ರಜ ।
ನಡಿಗಾ ಪಾದುಕೆಯ ನಿತ್ತು ಭರತಂ ಮಣಿದಂ ॥

ಬಳಿಕ ರಾಮನಾಮದಿಂದ ಬೆಳಗುತಲಿರುವ, ಸಕಲಗುಣಾಭಿಜ್ಞನಾದ ಆ ಹರಿಯು - ಶಬ್ದಗುಣವೆನಿಸಿ, ತನಗೆ ಪದವಾಗಿರುವ ವಿಷ್ಣುಪಥದಲ್ಲಿ ಪುಷ್ಪಕವಿಮಾನದೊಳಗೆ ಕುಳಿತು ಪ್ರಯಾಣಮಾಡುತ್ತಾ, ಕೆಳಗೆ

ಕಾಣಬರುತಲಿರುವ ರತ್ನಾಕರವನ್ನು ತೋರಿಸಿ, ತನ್ನ ಪ್ರಿಯವಲ್ಲಭೆಯಾದ ಸೀತೆಯನ್ನು ಕುರಿತು ಗಟ್ಟಿಯಾಗಿ ಇಂತೆಂದನು. —ಎಲೆ ವೈದೇಹಿ ! ನಾನು ಕಟ್ಟಿಸಿರುವ ಈ ಸೇತುವೆಯಿಂದ,ಮಲಯಪರ್ವತದವರೆಗೂ ಎರಡು ಪಾಲಾಗಿ, ಅಲ್ಲಲ್ಲಿ ನೊರೆಯನ್ನೊಳಗೊಂಡಿರುವ ಈ ಕಡಲನ್ನು ನೋಡಿದೆಯ ? ಶರದೃತುವಿನಿಂದ ನಿರ್ಮಲವೆನಿಸಿ, ಛಾಯಾಪಥದಿಂದ ಎರಡು ಭಾಗವಾಗಿ, ಅಲ್ಲಲ್ಲಿ ಅಂದವಾದ ತಾರೆಗಳನ್ನೊಳಗೊಂಡಿರುವ ಆಕಾಶಮಂಡಲದಂತೆ ಕಾಣಬರುತಲಿದೆ. ನಮ್ಮ ಪೂರ್ವ ಪಿತೃಗಳಲ್ಲೋರ್ವನಾದ ಸಗರಚಕ್ರವರ್ತಿಯು- ಪರಿಶುದ್ಧವಾದ ಅಶ್ವಮೇಧ ಯಾಗವನ್ನು ಮಾಡಲಾರಂಭಿಸಿ ತುರಂಗವನ್ನು ಬಿಟ್ಟನು. ಅದನ್ನು ಕಪಿಲಮುನಿಯು ರಸಾತಲವನ್ನು ಸೇರಿದ್ದನು. ಆ ಹಯವನ್ನು ಕಂಡು ಹಿಡಿಯಲು ನಮ್ಮ ಹಿರಿಯರಾದ ಸಗರಪುತ್ರರು-ಇಲ್ಲಿಯೇ ನೆಲವನ್ನು ಅಗೆದು,ಇದನ್ನು ಹೆಚ್ಚಿಸಿದರಂತೆ,ಅದರಿಂದ ಈ ಸಾಗರವು ನಮಗೆ ಪೂಜ್ಯವಲ್ಲವೆ?ಅರ್ಕಮರೀಚಿಗಳು - ಈ ಅಂಬುರಾಶಿಯಿಂದಲೇ ಜಲಮಯವಾದ ಗರ್ಭವನ್ನು ಧರಿಸತಕ್ಕುದು, ಇದರಿಂದಲೇ ಈ ಪಾರಾವಾರವು ಲೋಕೋಪಕಾರಿ ಎನಿಸಿದೆ, ರತ್ನಗಳೆಲ್ಲ ಇದರಲ್ಲಿಯೇ ಬೆಳೆವಳಿಗೆಯನ್ನು ಹೊಂದುವುದು. ತೇಜೋಮಯನಾಗಿ, ಲೋಕಾನಂದಕರನೆನಿಸಿರುವ ಚಂದ್ರನೇ ಮೊದಲಾದ ಶ್ರೇಷ್ಠವಸ್ತುಗಳಿಗೆ ಜನ್ಮಭೂಮಿ. ಆದುದರಿಂದಲೇ ರತ್ನಾಕರವೆಂಬ ಹೆಸರುವಾಸಿಯೂ ಬಂದಿದೆ, ಉದಕವೇ ಕಾಷ್ಠವಾಗಿರುವ ಅಗ್ನಿಯೂ ಇದರಲ್ಲಿ ಅಡಗಿದೆ, ಅಪಕರಿಸಿದರೂ ಆಶ್ರಿತರನ್ನು ತೊರೆಯದಿರುವುದು ಈ ಶರಧಿಯ ಶ್ಲಾಘ್ಯಗುಣವಲ್ಲವೆ ? ನಾನಾ ಆಕಾರಗಳನ್ನು ಪಡೆದಿರುವುದರಿಂದಲೂ, ಎಲ್ಲದಿಕ್ಕುಗಳಲ್ಲಿಯೂ ಹರಡಿರುವುದರಿಂದಲೂ, ಮಹಾವಿಷ್ಣುವಿನ ಹಾಗೆ, ಈ ಮಹೋದಧಿಯ ರೂಪವನ್ನು ಈ ಪ್ರಕಾರವಿರುವುದೆಂದಾಗಲೀ, ಇಷ್ಟು ಪರಿಮಾಣವುಳ್ಳುದೆಂದಾಗಲೀ ಗೊತ್ತುಮಾಡಲಿಕ್ಕೆ ಸಾಧ್ಯವೇ ಅಲ್ಲ. ಕಲ್ಪಾವಸಾನದಲ್ಲಿ-ಪುರಾಣ ಪುರುಷನಾದ ನಾರಾಯಣನು-ಸಕಲ ಲೋಕಗಳನ್ನೂ ತನ್ನಲ್ಲಿ ಅಡಗಿಸಿಕೊಂಡು, ತನ್ನ ಕೇವಲಸ್ವರೂಪವನ್ನು ಅವಲಂಬಿಸುವಿಕೆಯೆಂಬ ಯೋಗನಿದ್ರೆಯನ್ನಾಶ್ರಯಿಸಿ, ತನ್ನಯ ನಾಭಿಕಮಲದಿಂದುದಿಸಿ, ದಕ್ಷನೇ ಮೊದಲಾದವರಿಗೆ

ತಂದೆಯೆನಿಸಿದ ಪಿತಾಮಹನಿಂದ ಹೊಗಳಿಸಿಕೊಳ್ಳುತ್ತ, ಇಲ್ಲಿಯೇ ಪವಳಿಸುವುದು. ರೆಕ್ಕೆಗಳನ್ನು ಕಲಿಕ್ಕಿದ ಗೋತ್ರಾರಿಯಿಂದ ತಿರಸ್ಕಾರವನ್ನು ಪಡೆದು, ಹೆಮ್ಮೆಯುಡಗಿ ಏಕ್ಕಿಲ್ಲದೆ, ಓಡಿಬಂದ ನೂರಾರು ಭೂಧರಗಳು-ಪರರಾಯರಿಂದ ಪರಾಜಿತರಾದ ಅರಸರು— ಬಲಸೆಹೋಗಿ, ಮಧ್ಯಮ ಭೂಪಾಲನನ್ನು ಆಶ್ರಯಿಸುವ ಹಾಗೆ, ಶರಣ್ಯವಾಗಿರುವ ಈ ಸಮುದ್ರವನ್ನು ಮರೆಹೊಕ್ಕಿವೆ. ಇವರಿಂದಿದು ಧರ್ಮಾಕರವಲ್ಲವೆ ? ಶತಬಾಹುವೆನಿಸಿದ ಆದಿ ವರಾಹರೂಪಿಯಾದ ಆದಿಪುರುಷನು—ರಸಾತಲದಿಂದ ಈ ಸರಿತ್ಪತಿಯ ಮೂಲಕ ಭೂಮಿಯನ್ನು ಉದ್ಧರಮಾಡುವಾಗ, ನಿರ್ಮಲವಾದ ಇದರ ಜಲವು ಆತನಿಗೆ ಕ್ಷಣಕಾಲ ಮಾತ್ರ ಮುಖಾವರಣ ವಸ್ತ್ರದಂತೆ ಕಾಗೊಳಿಸುತಿದ್ದಿತು. ಇತ್ತ ನೋಡು-ಸ್ವಭಾವದಿಂದ ಪ್ರೌಢರಾದ ಅಂಗನೆಯರಂತೆ,ನದೀಸುದತಿಯರು ತಮ್ಮ ಮುಖಗಳನ್ನು ಈ ಸಾಗರ ಮುಖದಲ್ಲಿಡುವರು, ಚತುರನಾದ ಈ ಸಮುದ್ರನೂ ತನ್ನ ಅಲೆಯೆಂಬ ಅಧರವನ್ನು ಮುಂದಕ್ಕೆ ನೀಡುವನು, ಇದರಿಂದಲೇ ಅನ್ಯೋನ್ಯಾನುರಾಗದಿಂದ ಸಮಕಾಲದಲ್ಲಿ ಒಬ್ಬರಿಗೊಬ್ಬರು ಹಿರಿಗಸದಳನೆನಿಸಿದ ಮುತ್ತನಿಟ್ಟುಕೊಳ್ಳುತ್ತಲಿರುವಂತೆ ಕಾಣಬರುತಲಿದೆ. ಕೆಲವೆಡೆಗಳಲ್ಲಿ ತಿಮಿಗಳೆಂಬ ಮಹಾ ಮತ್ಸ್ಯಗಳು-ಜಲಚರಗಳಿಂದ ಸಹಿತವಾದ ನದೀಮುಖ ಜಲಗಳನ್ನು, ತೆರೆದುಕೊಂಡಿರುವ ತಮ್ಮ ಬಾಯ್ಗಳಿಂದ ಕುಡಿಯುವುವು. ನೀರು ಒಳಹೊಕ್ಕ ಕೂಡಲೆ ಬಾಯ್ಗಳನ್ನು ಮುಚ್ಚಿಕೊಂಡು, ತಮ್ಮ ತಲೆಗಳ ಮೇಲಿರುವ ರಂಧ್ರಗಳಿಂದಆಜಲಗಳನ್ನು ಜೇಕೊಳವಿಗಳಂತೆ ಎರಚುತ್ತಲಿರುವುವು. ಒಳಗೆ ಅಡಗಿರತಕ್ಕ ಆನೆಗಳಂತಿರುವ ಮೊಸಳೆಗಳು —ಅಲ್ಲಲ್ಲಿ ನೀರಿನಮೇಲಿರುವ ನೊರೆಗಳನ್ನು ಭೇದಿಸಿಕೊಂಡು, ಮೇಲಕ್ಕೆ ಬಹುವೇಗದಿಂದ ಬರುತಲಿವೆ,ಆಸಮಯದಲ್ಲಿ ಎರಡು ಭಾಗವಾದ ನೊರೆಗಳ ಖಂಡಗಳು-ಆ ಮೊಸಳೆಗಳ ಕಪೋಲಭಾಗದಲ್ಲಿ ಕ್ಷಣಕಾಲಮಾತ್ರ ಚಾಮರಗಳಂತೆ ಅಲಂಕಾರವಾಗಿವೆ, ಈ ಕಡಲ ತಡಿಯಲ್ಲಿನ ಮರಳುದಿಣ್ಣೆಗಳಲ್ಲಿ ಗಾಳಿಯನ್ನು ಕುಡಿಯಲಿಕ್ಕೆಂದು ಬಂದ, ನೀಳವಾಗಿ ಪವಳಿಸಿರುವ ಸರ್ಪಗಳಿಗೂ, ಜಲಭಾಗದಿಂದ ಉಕ್ಕಳಿಸಿ ಹಾಯ್ದು ಬರುತಲಿರುವ ತೋರವಾದ

ತೆರೆಗಳಿಗೂ ಭೇದವೇ ತಿಳಿಯುವುದಿಲ್ಲ, ಆದರೆ-ಸೂರ್ಯಕಿರಣಗಳ ಸಂಪರ್ಕದಿಂದ ಹೆಡೆಗಳಲ್ಲಿನ ರತ್ನಗಳ ಕಾಂತಿಗಳು ಹೇರಳವಾಗಿ ತಳ ತಳನೆ ಬೆಳಗುವುದರಿಂದ ಇವು ಸರ್ಪಗಳೆಂದು ಆಗ ವ್ಯಕ್ತವಾಗುವುದು. ನಿನ್ನ ತುಟಿಯೊಡನೆ ಸಾಮ್ಯವನ್ನು ಹೊಂದಿರುವ ಹವಳದ ಬಳ್ಳಿಗಳು ಈ ಸಮುದ್ರತೀರದಲ್ಲಿ ಬಹಳವಾಗಿವೆ ತರಂಗಗಳ ವೇಗದಿಂದ ಹಾರಿ ಬೀಳುವ ಶಂಖಗಳು-ಆಲತೆಗಳ ಮೇಲ್ಮುಖಗಳಾದ ಕುಡಿಗಳಿಗೆ ತೊಡರಿ ಕೊಂಡು, ವಿಳಂಬದಿಂದ ಮೆಲ್ಲಗೆ ಕಳಚಿ ಬೀಳುತ್ತಲಿವೆ. ಜಲಾಶಯ ದಲ್ಲಿ ನೀರಿನವರೆಗೂ ಮೇಘ ಮಂಡಲವು ಇಳಿದು, ಬಲುಆಳವಾದ ಎಡೆಯಲ್ಲಿ ವಿಚಿತ್ರವಾಗಿ ಸುತ್ತುತಲಿರುವ ಸುಳಿಗಳ ವೇಗದಿಂದ ತಾನೂ ಗಿರಗಿರನೆ ತಿರುಗುತಲಿದೆ. ಇದನ್ನು ನೋಡಿದರೆ, ಮಂದರಗಿರಿಯಿಂದ ಮರಳಿ ಕಡಲು ಕಡೆಯಲ್ಪಡುತ ಲಿರುವುದಂಬಂತೆ ಕಾಣಬರುವುದು. ಬಾಂದಳದಲ್ಲಿ ನಾವು ತೆರಳುತಲಿರುವ ಈ ಸ್ಥಳಕ್ಕೆ ಕೆಳಗಡೆಯಲ್ಲಿ ಕಬ್ಬಿಣದಿಂದ ಮಾಡಿರುವ ಚಕ್ರದಂತೆ ಕಾಣಬರುವ ಲವಣೋದಧಿಯ ಕಪ್ಪಾಗಿರುವ ತೀರಭೂಮಿಯು ಹೊಂಗೆಯ ಗಿಡಗಳ,ಮತ್ತು ತಾಳೆಯ ಮ ರಗಳ ಸೂಕ್ಷ್ಮವಾದ ವನಪಂಕ್ತಿಯಿಂದ, ಆ ಚಕ್ರದ ಸುತ್ತಣ ಅರುಗಿನಲ್ಲಿ ರುವ ಮಲಿನರೇಖೆಯಂತೆ ಕಂಗೊಳಿಸುತಲಿರುವುದು. ಮತ್ತು-ವಿಶಾಲ ನಯನೆಯಾದ ಓ ಸೀತೆ ! ತಟದಲ್ಲಿರುವ ಕೇದಗೆಯ ಗಿಡಗಳಲ್ಲಿನ ಹೂ ಗಳ ಪರಿಮಳದ ಪುಡಿಯನ್ನು ತರುತಲಿರುವ ಈ ಮಂದ ಮಾರುತವು- ನಿನ್ನ ಮುಖವನ್ನು ಸಂಭಾವಿಸುತ್ತಾ, ಇದುವರೆಗೂ ನಿನ್ನಯ ಮುಖಾ ಲಂಕಾರ ವಿಲ್ಲದಿರುವುದನ್ನು ನಾನು ಸಹಿಸದಿರುವೆನು ಎಂಬುದನ್ನು ತಾನ ತಿಳಿದಿರುವಂತೆ ತೋರುತಲಿದೆ.

ಇಗೋ:-ಇದೇ ಬಲು ಅಗಲವಾದ ಮಳಲಿನ ಬೈಲುನೆಲ. ಚಿಪ್ಪು ಗಳು ಒಡೆದು, ಸಿಡಿದು ಹರಡಿರುವ ಮುತ್ತುಗಳು ಕಂಗೊಳಿಸುತಲಿವೆ, ಕಾಯ್ಗಳಿಂದ ತುಂಬಿದ ಹೊಂಬಾಳೆಗಳ ಹೊರೆಯಿಂದ ತುಸ ಬಾಗು ತಲಿರುವ ಅಡಕೆಯ ಮರಗಳ ಸಾಲಿನಿಂದ ರಮಣೀಯವಾಗಿರುವ ಪಯೋಧಿಯ ತೀರಕ್ಕೆ ವಿಮಾನವೇಗದಿಂದ ಮುಹೂರ್ತ ಮಾತ್ರದಲ್ಲಿ ಬಂದು ಸೇರಿದೆವು. ಎಲೆ ಮೃಗಾಕ್ಷಿ ! ಇತ್ತ ಹಿಂದಕ್ಕೆ ತಿರುಗಿನೋಡು

ನಾವು ದಾಟಬಂದ ದಾರಿಯ ಕಡೆಗೆ ನಿನ್ನ ನೋಟವನ್ನು ಕಳುಹು ಆಗಲೆ ಬಲು ದೂರವಾಗಿ ತಟಾಯ್ತು ನಮ್ಮನ್ನು ಈವನ ಭೂಮಿಯು ದೂರವಾಗಿನಿಂದ ಸಮುದ್ರದಿಂದೀಚೆಗೆ ಹಿಂಬಾಲಿಸಿ ಬರುವಂತಿದೆ. ಎಲೆ ದೇವಿ ! ಈ ಅಚ್ಚರಿಯನ್ನು ನೋಡಿದೆಯ ? ಈ ವಿಮಾನರತ್ನವು-ನನ್ನ ಮನೋಭಿಲಾಷೆಯನ್ನು ಸ್ವಲ್ಪವಾದರೂ ಮೀರದೆ ಅನುಸರಿಸುತಲಿದೆ. ಒಂದು ಬಾರಿ ದೇವಮಾರ್ಗದಲ್ಲಿ ತೆರಳುವುದು, ಮತ್ತೊಂದು ಸಾರಿ ಮೇಘ ಮಂಡಲದ ಹಾದಿಗಿಳಿವುದು, ಇನ್ನೊಂದು ವೇಳೆ ಪಕ್ಷಿಪಥ ದಲ್ಲಿ ಚಲಿಸುವುದು. ಇಂದ್ರನ ಐರಾವತದ ಮದೋದಕದ ಸುವಾಸ ನೆಯನ್ನೊಳಗೊಂಡಿರುವ ತ್ರಿಪಥಗೆಯ ಅಲೆಗಳ ಮೇಲೆ ಹರಿದು ಬರುವ ಈ ತಂಗಾಳಿಯು-ಮಧ್ಯಾಹ್ನದ ಬಿಸಿಲಿನ ಝಳದಿಂದ ಬೆಮರ್ದ ನಿನ್ನ ಮುಖದ ಹನಿಗಳನ್ನು ಹೀರುತಲಿದೆ ಸೀತೇ ! ಮನೋವೇಗದಂತೆ ತೆರಳುತಲಿರುವ ಈ ದಿವ್ಯ ವಿಮಾನದ ಕಿಟಕಿಯಿಂದ ಹೊರಗೆ, ನೀನು ಲೀಲೆಯಿಂದ ಕುತೂಹಲಪಟ್ಟು, ಜೋತುಬಿಟ್ಟಿರುವ ಕೈಗೆ, ಪಕ್ಕ ದಲ್ಲಿ ಸರಿಯುತಲಿರುವ ಮೇಘವು- ತನ್ನಿಂದ ಹೊಳೆದ ಮಿಂಚಿನಿಂದ ಬೇ ರೊಂದು ತಳತಳಿಸುವ ಕಡಗವನ್ನು ತೊಡಿಸುವಂತಿದೆ.

ದುರುಳರಾಗಿದ್ದ ಖರನೇ ಮುಂತಾದ ರಕ್ಕಸರ ಹಾವಳಿಯನ್ನು ತಾಳಲಾರದೆ ಈ ಪ್ರಾಂತದ ತಪಸ್ವಿಗಳೆಲ್ಲ ಬಹುಕಾಲದ ಹಿಂದೆಯೇ ಇಲ್ಲಿಂದ ಓಡಿಹೋಗಿದ್ದರು, ಆ ಕೀಳರೆಲ್ಲ ಹಾಳಾಗಿ, ತಪಸ್ಸಿಗೆ ತಡೆಯು ತೊಲಗಿ, ನಿಶ್ಚಿಂತೆಯಾಯಿತೆಂದು ತಿಳಿದು, ಈಗೀಗ ಆಚೀರಾಂಬರ ರೆಲ್ಲರೂ ಮರಳಿ ಬಂದು, ಪುಣ್ಯಾಶ್ರಮಗಳಲ್ಲಿ ಹೊಸದಾಗಿ ಎಲೆ ಮನೆ ಗಳನ್ನು ಕಟ್ಟಿಕೊಂಡು, ಪೂರ್ವದಂತೆ ಅಂಜಿಕೆಯಿಲ್ಲದೆ, ಸುಖವಾಗಿ ತಪೋನಿರತ ರಾಗುತಲಿದಾರೆ. ಈ ಭೂಭಾಗದಲ್ಲಿಯೇ ನಾನು ಹಿಂದೆ ನಿನ್ನನ್ನು ಹುಡುಕುತಬಂದುದು, ನಿನ್ನ ಕಾಲಿನಿಂದ ಕೆಳಗೆ ಜಾರಿಬಿದ್ದು, ನಿನ್ನಡಿಯ ಅಗಲಿಕೆಯ ವ್ಯಥೆಯನ್ನು ತಾಳಲಾರದೆ,ಮೌನದಿಂದಿದ್ದ ಒಂದು ಕಾಲು ಕಡಗವು- ಇಲ್ಲಿಯೇ ನನಗೆ ದೊರೆತುದು. ಆ ವನಸ್ಥಲಿಯೇ ಇದು.

ಓಭಯಶೀಲೆ ! ಇತ್ತ ನೋಡ:-ನೀಚನಾದ ರಾಕ್ಷಸನು-ಇಲ್ಲಿ ಯೇ ನಿನ್ನನ್ನು ಕೊಂಡೊಯ್ದುದು, ಈ ಮಾರ್ಗದಲ್ಲಿ ನಾನು ನಿನ್ನನ್ನು

ಅರಸುತಬರುತ್ತಿರುವಲ್ಲಿ, ದಾರಿಯುದ್ದಕ್ಕೂ ಬೆಳೆದಿರುವ ಬಳ್ಳಿಗಳು-ಹೇಳತಿಳಿಸಲಿಕ್ಕೆ ಶಕ್ತಿಯಿಲ್ಲದೆ, ನೀಳವಾದ ತಮ್ಮ ಕೊನೆಗಳೆಂಬ ಕರಗಳಲ್ಲಿನ ಎಲೆಗಳೆಂಬ ಬಾಗಿದ ಬೆರಳುಗಳಿಂದ ಕನಿಕರಿಸಿ ನಿನ್ನ ದಾರಿಯನ್ನು ನನಗೆ ತೋರುತಲಿದ್ದುವು. ಎಳೆಯ ಹುಲ್ಲನ್ನು ಮೇಯುತಲಿದ್ದ ಹೆಣ್ಣು ಹುಲ್ಲೆಗಳು-ಮೇವನ್ನು ತೊರೆದು, ತಲೆಗಳನ್ನೆತ್ತಿ, ತೆಂಕಣದೆಸೆಯನ್ನೇ ಅರಳಿದ ಕಣ್ಣುಗಳಿಂದ ನೋಡುತ್ತಾ, ನಿನ್ನ ದಾರಿಯನ್ನರಿಯದೆ ಕಳವಳಿಸುತಲಿದ್ದ ನನಗೆ ದಿಕ್ಕನ್ನು ಸೂಚಿಸುತ ಬೆಪ್ಪಾಗಿ ನಿಂತಿದ್ದುವು. ಇಗೋ-ಈಗೀಗ ಸ್ವಲ್ಪಸ್ವಲ್ಪವಾಗಿ ಇದಿರಿಗೆ ಮುಗಿಲನ್ನು ಮುಟ್ಟುತಲಿರುವ ಶಿಖರವು ದೂರದಲ್ಲಿ ಕಾಣಬರುತಲಿದೆ ನೋಡು-ನಾನೀಮಾಲ್ಯವತ್ಪರ್ವತದ ಬಳಿಗೆ ಬಂದು, ನಿನ್ನಗಲಿಕೆಯ ಶೋಕವನ್ನು ತಾಳಲಾರದೆ, ಮೋಡಗಳಿಂದುದಿರುವ ಮಳೆಯ ಹನಿಗಳೊಂದಿಗೆ ಕಣ್ಣೀರನ್ನು ಕರೆದೆನು. ಈ ಪರ್ವತಾಗ್ರದಲ್ಲಿಯೇ ಆಗ ಮುಂಗಾರುಮಳೆಗರೆಯಲು, ಬತ್ತಿದ್ದ ಕೊಳಗಳ ನೆಲದ ಮೇಲೆ ಹನಿಗಳು ಬಿದ್ದು, ಅಲ್ಲಿಂದೆದ್ದು ಗಮಗಮಿಸುತ ಬಂದ ಸುವಾಸನೆಯನ್ನೂ, ಅರಳುತ ಬಂದಿದ್ದ ನೀಪಕುಸುಮವನ್ನೂ, ಕುಣಿಯುತಲಿದ್ದ ನವಿಲುಗಳ ಗಂಭೀರವಾದ ಕೇಕಾರವಗಳನ್ನೂ, ಕಂಡು, ಕೇಳಿ, ನಿನ್ನ ಅಗಲಿಕೆಯ ದುಃಖವನ್ನು ತಾಳಲಾರದೆ ಹೋದೆನು. ಹಿಂದೆ ನಿನ್ನೊಡನೆ ನಾನು ಈ ಬೆಟ್ಟದ ಮೇಲೆ ಸಂಚರಿಸುತಿದ್ದವೇಳೆಯಲ್ಲಿ ಮೋಡಗಳು ಗುಡುಗಿ, ಗವಿಗಳಿಂದ ಸೆಲೆಯೂ ಹೊರಡಲು, ಕೂಡಲೆ ಹೆದರಿದ ನೀನು ನಡುಗುತ ತಟ್ಟನೆ ನನ್ನ ಬಳಿಗೆ ಓಡಿಬಂದು, ನನ್ನನ್ನು ಅಪ್ಪಿಕೊಳ್ಳಲಿಲ್ಲವೆ ?, ಆ ನಿನ್ನನ್ನು ಕಳೆದುಕೊಂಡು, ಮರಳಿ ನಾನು ಇಲ್ಲಿಗೆ ಬಂದಾಗ ಅದೆಲ್ಲವೂ ನೆನಪಿಗೆ ಬಂದಿತು, ಆ ಸಮಯದಲ್ಲಿ ನನ್ನ ಮನಸ್ಸಿಗೆ ಉಂಟಾದ ಕ್ಲೇಶವನ್ನು ಓಪ್ರಿಯಳೇ ! ಇಷ್ಟೆಂದುಹೇಳಲಾರೆನು. ನಿನ್ನ ವಿರಹದಿಂದ ನಾನು ಇಲ್ಲಿಗೆ ಬಂದಿರುವಾಗಲೇ ವರ್ಷಧಾರೆಯು ಬಿದ್ದುದರಿಂದ ಕೆಂಬಣ್ಣದ ಕಂದಳೀಕುಸುಮವು ಅರಳಿದುದು, ನೆಲದಿಂದೆದ್ದ ಹೊಗೆಯ ಬಣ್ಣದ ಆವಿಯೂ ಅದಕ್ಕೆ ತಾಗಿತು, ವಿವಾಹವೇದಿಕೆಯಲ್ಲಿ ನಾವಿಬ್ಬರೂ ಕುಳಿತಿರುವ ವೇಳೆ, ಹೋಮ

ಧೂಮದಿಂದ ಜಲಯುಕ್ತವಾದ ನಿನ್ನ ಕಣ್ಣಿನ ಸೊಬಗು ನೆನಪಿಗೆ ಬಂದಿತು. ಆಗ ನನ್ನ ಮನಸೊಂದ ಬಗೆಯನ್ನು ವಿವರಿಸಲಾರೆನು. ದಡದಲ್ಲಿ ಒತ್ತಾಗಿ ಬೆಳೆದಿರುವ ವಂಜುಳವೃಕ್ಷಗಳಿಂದ ಆವರಿಸಲ್ಪಟ್ಟು, ಸ್ವಲ್ಪಸ್ವಲ್ಪವಾಗಿ ಕಾಣಬರುತ, ಹಾರುತಲಿರುವ ಸಾರಸ ಪಕ್ಷಿಗಳನ್ನೊಳಗೊಂಡಿರತಕ್ಕ ಇಗೋ ಆ ಪಂಪಾಸರೋವರದ ಬಳಿಗೆ ಗಮಿಸಿದ ಈ ನನ್ನ ದೃಷ್ಟಿಯು - ಬಹುದೂರ ತೆರಳಿದುದರಿಂದ ಬಳಲಿ, ಆ ಜಲಗಳನ್ನು ಆದರದಿಂದ ಕುಡಿಯುವಂತಿದೆ. ನಿನ್ನ ವಿರಹದಲ್ಲಿದ್ದ ನಾನು ಆಗ ಇಲ್ಲಿಗೆ ಬಂದೆನು, ಒಡನಾಡಿಗಳಾದ ಚಕ್ರವಾಕ ಪಕ್ಷಿಗಳು-ಸತಿಯು ಪತಿಗೂ ಪತಿಯು, ಸತಿಗೂ ಪ್ರೇಮಭರದಿಂದ ನೈದಿಲೆಹೂಗಳನ್ನು ಕೊಕ್ಕಿನಿಂದೆತ್ತಿ ಕೊಡುತಲಿದ್ದುದನ್ನು ಕಂಡೆನು, ಪ್ರಿಯವಲ್ಲಭೆಯೇ ! ಆಗ ನಿನಗೆ ಬಹುದೂರದಲ್ಲಿದ್ದ ಆ ನಾನು-ಕೂಡಲೆ ತಹತಹ ಪಡುವ ಮನದಿಂದ ನಿನ್ನನ್ನು ನೆನೆದೆನು. ಅಲ್ಲಿಂದ ಮುಂದೆ ಸ್ವಲ್ಪದೂರ ಬಂದೆನು, ಬಲು ಅಂದವಾದ ಹೂಗಳ ಗೊಂಚಲುಗಳಿಂದ ಬಾಗಿರುವ ಸರೋವರದ ತೀರದಲ್ಲಿನ ಈ ಅಶೋಕಲತೆಯನ್ನು ನೋಡಿದೆನು, ನನ್ನ ಪ್ರಜ್ಞೆಯು ಎಲ್ಲಿ ಹಾರಿಹೋಯಿತೋ ಅರಿಯೆನು, ನೀನು ದೊರೆತೆ ಎಂದೇ ಭಾವಿಸಿದೆನು, ದುಡುದುಡನೆ ಓಡಿಹೋಗಿ, ಹಾ ! ಸೀತೆ ! ಸಿಕ್ಕಿದೆಯಾ ! ಎಂದು ಅಪ್ಪಿಕೊಳ್ಳಲಿಕ್ಕೆ ಹೋದೆನಂತೆ ! ಆಗ-ಅಯ್ಯೋ ! ಅಣ್ಣಾ !! ಸೀತೆಯಲ್ಲ, ಲತೆ ಎಂದು ಕಣ್ಣೀರನ್ನು ಸುರಿಸುತ್ತಾ ಸೌಮಿತ್ರಿಯು-ನನ್ನನ್ನು ತಡೆದನಂತೆ.

ನಮ್ಮ ಈ ಪುಷ್ಪಕವಿಮಾನದ ಅಂತಸ್ತಿನ ಮೇಲುಗಡೆ ಗಾಳಿಯಿಂದ ಅಲುಗಿ, ಸದ್ದುಮಾಡುತಲಿರುವ ಬಂಗಾರದ ಕಿರುಗೆಜ್ಜೆಗಳ ಧನಿಯನ್ನು ಕೇಳಿದ ಈ ಗೋದಾವರೀ ನದಿಯಲ್ಲಿನ ಸಾರಸ ಪಕ್ಷಿಗಳು-ತಮ್ಮಂತೆ ದನಿಗೆಯ್ವ ಬೇರೊಂದು ಹಿಂಡು ಬರುತಲಿದೆಯೆಂದು ಭಾವಿಸಿ, ಆಗಸಕ್ಕೆಹಾರಿ, ನಿನ್ನನ್ನು ಇದಿರ್ಗೊಳ್ಳುವಂತಿವೆ.

ಪ್ರಿಯಳೇ ! ನೀನು ಬಡನಡುವಿನವಳಾದರೂ ಗಡಿಗೆಯಿಂದ ನೀರೆರೆದು ಸಾಕಿದ ಎಳೆಮಾವಿನ ಗಿಡಗಳುಳ್ಳುದೂ, ತಲೆಗಳೆನ್ನೆತ್ತಿ ರೆಪ್ಪೆಬಡಿಯದೆ ನೋಡುತಲಿರುವ ಹುಲ್ಲೆಗಳುಳ್ಳುದೂ ಆಗಿರುವ ಈ ಪಂಚ

ವಟಯು-ಬಹುಕಾದಮೇಲೆ ನೋಡುವ ನನ್ನ ಮನಸ್ಸನ್ನು ಬಹಳ ವಾಗಿ ಆನಂದಗೊಳಿಸುತಲಿದೆ. ನಾವಿಲ್ಲಿವಾಸವಾಸವಾಡುತಿದ್ದ ವೇಳೆ ಯೊಳಗೆ, ನಾನು ಆಗಾಗ ಬೇಟೆಗೆ ಹೋಗಿದ್ದು ಬಳಲಿ ಬಂದು, ಈ ಗೋದಾನದೀ ತೀರದಲ್ಲಿನ ವಾನೀರತರುಗಳ ತೋಪಿನೊಳಗೆ ನಿನ್ನ ತೊಡೆಯ ಮೇಲೆ ತಲೆಯನ್ನಿಟ್ಟು ಹಾಯಾಗಿ ಮಲಗುತಿದ್ದುದು ನೆನಪಿಗೆ ಬರುತಲಿದೆ. ಮಳೆಗಾಲದಲ್ಲಿ ಬಾಡಾಗಿದ್ದ ಜಲಗಳನ್ನು ನಿರ್ಮಲಗೊಳಿಸು ವವನೂ, ಹುಬ್ಬನ್ನು ಡೊಂಕುಮಾಡಿದ ಮಾತ್ರದಿಂದ ನಹುಷನನ್ನು ಸ್ವರ್ಗದಿಂದ ನೆಲಕ್ಕುರುಳಿಸಿದವನೂ ಆಗಿರುವ ಮಹಾನುಭಾವನಾದ ಅಗಸ್ತ್ಯಮಹಾಮುನಿಯೂ ಇದರ ಬಳಿಯಣ ಪುಣ್ಯಾಶ್ರಮದಲ್ಲಿಯೇ ವಾಸಮಾಡುತಲಿರುವುದು, ನಿರ್ಮಲವಾದ ಕೀರ್ತಿಯನ್ನು ಪಡೆದಿರುವ ಆ ಕುಂಭಸಂಭವಮುನಿಯ ತ್ರೇತಾಗ್ನಿಯಿಂದ ಹೊರಟು ಬರುತಲಿ ರುವ ಹೋಮಧೂಮದ ದಿವ್ಯಗಂಧವನ್ನು ಆಘ್ರಾಣಿಸಿ, ನನ್ನ ಅಂತ ರಾತ್ಮವು ರಜೋಗುಣದ ಹೊರೆಯನ್ನು ತೊರೆದು, ಹಗುರವಾಗುತ ಲಿದೆ. ಮಾನವಂತೆಯಾದ ಓ ಸೀತೆ! ಇಲ್ಲಿನೋಡು - ಆ ಅಗಸ್ತ್ಯಮ ಹರ್ಷಿಯ ತಪೋವನದ ತಡಿಯಲ್ಲಿ ವಿಹಾರಜಲದಿಂದೊಡಗೂಡಿದ ಪಂಚಾಪ್ಸರವೆಂಬ ದಿವ್ಯಸರೋವರವನ್ನೊಳಗೊಂಡಿರುವ ಶಾತಕರ್ಣಿ ಮುನಿಯ ಪುಣ್ಯಾಶ್ರಮವು ಬಹುದೂರದಿಂದ ನೋಡುತಲಿರುವ ನಮಗೆ ಮೋಡಗಳ ಸಂದಿನಲ್ಲಿ ಕಾಣಬರುವ ಚಂದ್ರಬಿಂಬದ ಹಾಗೆ, ಸುತ್ತು ಬಳಸಿರುವ ವನದಿಂದ ಬಹುರಮಣೀಯವಾಗಿ ಕಾಣಬರುತಲಿದೆ, "ಪೂ ರ್ವಕಾಲದಲ್ಲಿ ಆಶಾತಕರ್ಣಿಮುನಿಯು ಹುಲ್ಲನ್ನು ಮಾತ್ರವೇ ತಿಂದು ಕೊಂಡು, ತಪವನ್ನಾಚರಿಸುತ್ತಾ ಇಲ್ಲಿ ಮೃಗಗಳೊಂದಿಗೆ ವಾಸಮಾಡು ತಲಿದ್ದನು. ಆತನ ಸಮಾಧಿಯಿಂದ ಭಯಪಟ್ಟ ಇಂದ್ರನು-ಐದುಮಂದಿ ಅಪ್ಸರಸರನ್ನು ಕಳುಹಿದನು, ಆಗ ಮುನಿಯು ಅವಿವ್ಯಾಂಗನೆಯರ ಪಾ ಯವೆಂಬ ಕಪಟದ ಬೋನಿಗೆ ಸಿಲುಕಿದನು" ಎಂದು ಹೇಳುವರು. ಈ ಸರೋವರದೊಳಗಡಗಿರುವ ಸೌಧದಲ್ಲಿ ಆರಂಭವಾದ ಸಂಗೀತಮೃದಂಗ ಘೋಷವು-ಮುಗಿಲಿಗೆ ವ್ಯಾಪಿಸಿ, ನಮ್ಮ ಪುಷ್ಪಕದ ಚಂದ್ರಶಾಲೆಯನು ಪ್ರತಿಧ್ವನಿಯಿಂದ ಕ್ಷಣಕಾಲಸಶಬ್ದವಾದುದನ್ನಾಗಿ ಮಾಡುತಲಿದೆ.

ಇದರ ಹತ್ತಿರದಲ್ಲಿಯೇ ಸಚ್ಚಾರಿತ್ರ್ಯದಿಂದ ಬಹುಶಾಂತನೆನಿಸಿರುವ ಸುತೀಕ್ಷ್ಣನೆಂಬ ಮಹಾತಪಸ್ವಿಯು ಜ್ವಲಿಸುತಲಿರುವ ನಾಲ್ಕು ಅಗ್ನಿಗಳ ನಡುವೆ ನಿಂತು, ತೀವ್ರವಾದ ತಪಸ್ಸನ್ನು ಆಚರಿಸುತಲಿರುವನು, ಹಣೆಯನ್ನು ಸುಡುತಲಿರುವ ಸೂರ್ಯನೇ ಈತನಿಗೆ ಐದನೆಯ ಅಗ್ನಿಯೆನಿಸಿದಾನೆ. ಈತನ ತಪಸ್ಸನ್ನು ಭಂಗಪಡಿಸಬೇಕೆಂದು ಹಿಂದೆ ಮಹೇಂದ್ರನು ಸುರಸುಂದರಿಯರನ್ನು ಕಳುಹಿದನು, ಅವರಿಲ್ಲಿಗೈತಂದು, ಮುಗುಳುನಗೆಯಿಂದೊಡಗೂಡಿದ ಕುಡಿಗಣ್ಣನೋಟವೇ ಮುಂತಾದ ಬಗೆಬಗೆಯ ಬೆಡಗುಗಳನ್ನೆಲ್ಲ ತೋರಿದರು ಆ ಚೇಷ್ಟೆಗಳೊಂದೂ ಈ ಮಹರ್ಷಿಯಮನವನ್ನು ಭೇದಿಸಲು ಸಮರ್ಥವೆನಿಸಲಿಲ್ಲ. ಓ ಜಾನಕಿ ! ಈ ಮಹಾಮುನಿಯು—ಜಪಮಣಿಮಾಲೆಯ ಕಂಕಣವುಳ್ಳುದೂ, ಹುಲ್ಲೆಗಳನ್ನು ಮೈದಡವಿ ತುರಿಸತಕ್ಕುದೂ, ದರ್ಭೆಯ ಹುಲ್ಲನ್ನು ಕುಯ್ಯುತಕ್ಕುದೂ ಆಗಿ, ಇಂದ್ರಿಯ ಜಯವನ್ನೂ, ಭೂತದಯೆಯನ್ನೂ, ಸತ್ಕರ್ಮಾಚರಣೆಯನ್ನೂ ಸೂಚಿಸುವ, ತನ್ನ ಬಲದೋಳನ್ನು ಎತ್ತಿ ಇಗೋ ನನ್ನನ್ನು ಪೂಜಿಸುತಲಿರುವನು. ಮತ್ತು-ಮೌನವ್ರತವನ್ನವಲಂಬಿಸಿರುವುದರಿಂದ ನಾನೊಪ್ಪಿಸಿದ ವಂದನೆಯನ್ನು ಸ್ವಲ್ಪವಾಗಿ ಅಲುಗಿದ ಶಿರದಿಂದ ಪರಿಗ್ರಹಿಸಿ, ಕ್ಷಣಕಾಲ ಮಾತ್ರ ಮರೆಯಾಗಿದ್ದು, ಕೂಡಲೆ ನಮ್ಮ ವಿಮಾನವು ಮುಂದರಿಯಲು, ತೆರಪಾದ ತನ್ನ ದೃಷ್ಟಿಯನ್ನು ಮರಳಿ ಸಹಸ್ರರಶ್ಮಿಯಲ್ಲಿ ನೆಲೆಗೊಳಿಸಿದಾನೆ.

ಇದೇ ಬಹುಮಂದಿ ಅತಿಥಿಗಳನ್ನು ಸತ್ಕರಿಸುತಲಿದ್ದ ಮಹಾನುಭಾವನಾದ ಶರಭಂಗಮಹರ್ಷಿಯ ಪಾವನವಾದ ಪುಣ್ಯಾಶ್ರಮವು. ಆಹಿತಾಗ್ನಿಯಾಗಿದ್ದ ಆ ತಪಸ್ವಿಯೇ ಹಿಂದೆ ನಾವಿಲ್ಲಿಗೆ ಬಂದವೇಳೆಯೊಳಗೆ ಸಮಿತ್ತುಗಳಿಂದ ಅಗ್ನಿಯನ್ನು ಪ್ರಜ್ವಲಗೊಳಿಸಿ, ಮಂತ್ರಪೂತವಾಗಿದ್ದ ತನ್ನ ತನುವನ್ನೂ ತನೂನಪಾತಿನಲ್ಲಿ ಹೋಮಮಾಡಿದನು ಆ ಮಹಾಮುನಿಯ ತಪೋವನದಲ್ಲಿನ ಫಲವೃಕ್ಷಗಳೇ-ಈಗ ದಾರಿನಡೆದು ಬಳಲಿ, ಅತಿಥಿಗಳಾಗಿ ಬಂದವರಿಗೆ ನೆಳಲನ್ನಿತ್ತು ಹಣ್ಣುಹಂಪಲುಗಳಿಂದ ಉಪಚರಿಸಿ, ಅಭ್ಯಾಗತ ಸತ್ಕಾರವನ್ನು ಸುಖವಾಗಿ ನಡೆಸುತಲಿವೆ. ಅದರಿಂದ ಒಳ್ಳೆಯ ಮನೆತನದ ಸುಪುತ್ರರಲ್ಲಿ ಹೇಗೋ ಹಾಗೆ ಈ ವನ

ತರುಗಳಲ್ಲಿಯೂ ಸತ್ಕಾರ ಸಂಪ್ರದಾಯವು ನೆಲೆಗೊಂಡಿದೆ. ಓ ಸುಂದ ರಾಂಗಿ ! ಎಡಬಿಡದೆ ಹರಿಯುವ ಜಲಧಾರೆಯ ಧ್ವನಿಯಿಂದೊಡಗೂಡಿದ ಗವಿಯೆಂಬ ಮುಖವುಳ್ಳುದೂ, ತುದಿಗೆ ಸಿಲುಕಿರುವ ಮೋಡವೆಂಬ ಗೂಟಿಯಾಟದ ಕೆಸರು ಮಣ್ಣಿನಿಂದೊಡಗೂಡಿದ ಕೋಡುಳ್ಳದೂ ಆಗಿರುವ ಈ ಚಿತ್ರಕೂಟವು-ಕೊಬ್ಬಿ ಗುಟರಿಕೆಯನ್ನು ಹಾಕುತಲಿರುವ ಗೂಳಿಯಂತೆ ನನ್ನ ದೃಷ್ಟಿಯನ್ನು ಸೆಳೆಯುತಲಿದೆ, ಬಹು ನಿರ್ಮಲವೂ, ಗಂಭೀರವೂ ಆಗಿರುವ ಪ್ರವಾಹವನ್ನೊಳಗೊಂಡು, ಪಾತ್ರವು ವಿಸ್ತಾರವಾಗಿದ್ದರೂ ಇಲ್ಲಿಗೆ ಬಹು ದೂರವಾಗಿರುವುದರಿಂದ ಬಹು ಸೂಕ್ಷ್ಮವಾಗಿಯೂ ನೀಳವಾಗಿಯೂ ಕಾಣಬರುತ, ಚಿತ್ರಕೂಟದ ಬಳಿಯಲ್ಲಿ ಹರಿಯುತಲಿರತಕ್ಕ ಈ ಮಂದಾಕಿನಿಯೆಂಬ ನದಿಯು-ಭೂದೇವಿಯ ಕೊರಳಿಗೆ ಇಳಿಯ ಹಾಕಿರುವ ಮುತ್ತಿನಹಾರದಂತೆ ಕಂಗೊಳಸುತಲಿರುವುದು. ಈ ಗಿರಿಯ ಹತ್ತಿರದಲ್ಲಿಯೇ ಒಂದು ಕರಿಯ ಹೊಂಗೆಯ ಗಿಡವು ಕಾಣಬರುತಲಿದೆ ನೋಡು, ತಳತಳಿಸುವ ಇದರ ಚಿಗುರಿನ ಗೊಂಚಲನ್ನು ಒಂದು ಸಾರಿ ನಾನು - ಯವಾಂಕುರದಂತೆ ಬೆಳಗುವ ನಿನ್ನ ಕಪೋಲಕ್ಕೆ ಅಲಂಕಾರವಾಗಿರುವಂತೆ ಕರ್ಣಾಭರಣವನ್ನಾಗಿ ಸಿಂಗರಿಸಲಿಲ್ಲವೆ ?

ಇತ್ತ ಮತ್ತೊಂದು ಅಮೋಘವಾದ ವನವು ಕಂಗೊಳಿಸುತಲಿದೆ, ಇದನ್ನವಲೋಕಿಸು- ಇಲ್ಲಿ - ದಂಡಿಸುವರೆಂಬ ಭಯವಿಲ್ಲದೆಯೇ ಮೃಗಗಳು ಬಹು ಶಾಂತ ಸ್ವಭಾವದಿಂದಿರುವುವು, ಹೂಬಿಡದೆಯೇ ಯಾವಾಗಲೂ ವೃಕ್ಷಗಳು ಫಲಭರಿತಗಳಾಗಿವೆ. ಈ ಪುಣ್ಯಾಶ್ರಮವೇ ಅತ್ರಿಮಹಾಮುನಿಯ ತಪಸ್ಸಿಗೆ ಸಾಧನವೆನಿಸಿರುವುದು, ತನ್ನ ಸ್ಥಿತಿಯಿಂದಲೇ ತಪೋನಿಧಿಯ ಅಪಾರವಾದ ತಪಃ ಪ್ರಭಾವವನ್ನು ಸೂಚಿಸುತಲಿದೆ.

ಸರ್ವಲೋಕ ಪ್ರಸಿದ್ಧವಾದ ಮಹಿಮೆಯನ್ನೊಳಗೊಂಡಿರುವ ಆ ಅತ್ರಿಮಹಾ ಮುನಿಯ ಧರ್ಮಕಳತ್ರವಾದ ಅನಸೂಯೆಯು-ಕಶ್ಯಪಾದಿ ಸಪ್ತರ್ಷಿಗಳು ಪೂಜಾರ್ಥವಾಗಿ ಏತ್ತಿಕೊಳ್ಳತಕ್ಕ ಕನಕ ಕಮಲಗಳನ್ನೊಳಗೊಂಡು, ಮುಕ್ಕಣ್ಣನ ಮೌಳಿಮಾಲೆಯಂತಿರುವ ತ್ರಿಪಥಗೆಯನ್ನು

ತಪೋಧನರ ತ್ರಿಕಾಲ ಸ್ನಾನಕ್ಕೆ ಸಾಧನವಾಗಿರುವಂತೆ ಇಲ್ಲಿಯೇ ಹರಿಯುವ ಹಾಗೆ ಮಾಡಿದಳಂತೆ. ಇಂದ್ರಿಯ ಜಯಾರ್ಥವಾಗಿ ವೀರಾಸನದಲ್ಲಿ ಕುಳಿತು, ಯೋಗಾರೂಢರಾಗಿರುವ ಮಹರ್ಷಿಗಳಿಗೆ ಆಸರೆಯಾದ ಈ ತಪೋವನ ತರುಗಳು - ತಮ್ಮ ಬುಡದಲ್ಲಿರುವ ಜಗುಲಿಗಳಿಂದೊಡಗೂಡಿ, ಗಾಳಿಯು ಬೀಸದೆ ನಿಶ್ಚಲಗಳಾಗಿರುವುದರಿಂದ, ತಾವೂ ವೀರಾಸನವನ್ನವಲಂಬಿಸಿ ಧ್ಯಾನಪರಗಳಾಗಿರುವಂತೆ ಕಾಣಬರುತಲಿವೆ. ಎಲೆವೈದೇಹಿ ! ನಾವು ಹಿಂದೆ ದಂಡಕಾರಣ್ಯವನ್ನು ಹೊಗುವಾಗ ನೀನು—“ ಎಲೈ ನ್ಯಗ್ರೋಧ ಮಹಾ ವೃಕ್ಷವೇ ! ನಿನಗೆ ನಮಸ್ಕರಿಸುವೆನು, ನನ್ನ ಪತಿಯು ತಪ್ಪದೆ ವ್ರತವನ್ನು ಪಾಲಿಸಲಿ” ಎಂದಾವ ಮಹೀರುಹವನ್ನು ಪ್ರಾರ್ಥಿಸಿದೆಯೋ ? ಆ ಶ್ಯಾಮವೆಂಬ ವಟತರುವಿಲ್ಲಿ ಕಾಣಬರುತಲಿದೆ ನೋಡು. ಇದೀಗ ಪೂರ್ಣಫಲಭರಿತವಾಗಿ, ಪದ್ಮರಾಗ ಮಣಿಗಳ ರಾಶಿಯಂತೆ ಕಂಗೊಳಿಸುತಲಿರುವುದು.

ಅಹಹ ! ಕೋಮಲಾಂಗಿಯಾದ ಓ ಮೈಥಿಲಿ ! ಯಮುನೆಯ ಅಲೆಗಳಿಂದ ಕಲೆಯುತಲಿರುವ ಪ್ರವಾಹವನ್ನೊಳಗೊಂಡಿರುವ ಈ ಜಾಹ್ನವಿಯ ಹೊಳೆವನ್ನು ನೋಡಿದೆಯಾ ? ಒಂದು ಕಡೆಯಲ್ಲಿ—ಸುತ್ತಲೂ ಹರಡುತಲಿರುವ ಕಾಂತಿಗಳನ್ನೊಳಗೊಂಡ ಇಂದ್ರ ನೀಲ ಮಣಿಗಳೊಂದಿಗೆ ಪೋಣಿಸಿರುವ ಮುತ್ತುಗಳ ಹಾರದಂತೆ ಬೆಳಗುತಲಿದೆ. ಮತ್ತೊಂದು ಕಡೆಯಲ್ಲಿ - ಕನ್ನೈದಿಲೆಗಳ ಸಂಗಡ ಸೇರಿಸಿ ರಚಿಸಿರುವ ಬೆಳ್ದಾವರೆಗಳ ಸರದಂತೆ ಕಂಗೊಳಿಸುತಲಿದೆ. ಒಂದೆಡೆಯಲ್ಲಿ - ನೀಲ ಹಂಸಗಳಿಂದೊಡಗೂಡಿರುವ ರಾಜಹಂಸಗಳ ಪಙ್ತಿಯಂತೆ ಪ್ರಕಾಶಿಸುತಲಿದೆ. ಬೇರೊಂದೆಡೆಯಲ್ಲಿ - ಭೂದೇವಿಗೆ ಕಲ್ಪಿಸಿರುವ ಕಾಲಾಗರು ಮಕರಿಕಾ ಪತ್ರದಿಂದ ಸಹಿತವಾದ ಚಂದನದ ಲೇಪದಂತೆ ಭಾಸಿಸುತಲಿದೆ. ಒಂದು ಸ್ಥಳದಲ್ಲಿ - ಮರಗಳ ನೆಳಲುಗಳೊಳಗೆ ಅಡಗಿರುವ ಕತ್ತಲುಗಳ ಸಂದುಗಳಲ್ಲಿ ಮಿಳಿತವಾದ ಬೆಳ್ದಿಂಗಳ ಬೆಳಕಿನಂತೆ ಕಳಕಳಿಸುತಲಿದೆ. ಇನ್ನೊಂದು ತಾವಿನಲ್ಲಿ - ನಡು ನಡುವೆ ಕಾಣಬರತಕ್ಕ ಬಾಂದಳವನ್ನೊಳಗೊಂಡಿರುವ ಶರನ್ಮೇಘಗಳ ಸಾಲಿನಂತೆ ಶೋಭಿಸುತಲಿದೆ. ಒಂದು ಪ್ರದೇಶವಲ್ಲಿ -ಕೃಷ್ಣಸರ್ಪಾಲಂಕೃತವಾಗಿ, ಭಸ್ಮಾಂಗ

ರಾಗವನ್ನೊಳಗೊಂಡ ಶಂಕರನ ಶರೀರದಂತೆ ದೇದೀಪ್ಯಮಾನವಾಗಿ ರುವುದು. ಇದೇ ಮಹಾ ಭೂಭಾಗವೆನಿಸಿದ ಪ್ರಯಾಗವು. ಸಮು ದ್ರಪತ್ನಿಯರೆನಿಸಿದ ಗಂಗಾ ಯಮುನೆಯರ ಈ ಸಂಗಮ ಸ್ಥಲದಲ್ಲಿ ಸ್ನಾನಮಾಡಿ, ತನುವನ್ನು ತ್ಯಜಿಸಿ, ಪೂತಾತ್ಮರೆನಿಸಿದ ಪುರುಷರಿಗೆ, ತತ್ವಜ್ಞಾನವಿಲ್ಲದಿದ್ದರೂ ಪ್ರಾರಬ್ಧ ಕರ್ಮದಿಂದ ಬದಗಿದ ಶರೀರದ ತ್ಯಾಗಾನಂತರದಲ್ಲಿ ಮರಳಿ ಶರೀರ ಸಂಬಂಧವಿಲ್ಲದ ಮುಕ್ತಿಯು ಸಮ ನಿಸುವುದೆಂದು ಪ್ರಾಜ್ಞರು ಹೇಳುವರು.

ಅಯಿ ಜನಕ ರಾಜನಂದಿನೀ ! ಇದೇ ಬೇಡರೊಡೆಯನಾದ ಗುಹನ ಶೃಂಗಿಬೇರಪುರವು. ಹಿಂದೆ ನಾನು ಮೌಳಿಮಣಿಯನ್ನು ತೆಗೆದಿ ಟ್ಟು, ಆಲದಹಾಲಿನಿಂದ ಜಡೆಗಳನ್ನು ಕಲ್ಪಿಸಿಕೊಳ್ಳುತಲಿರುವುದನ್ನು ನೋಡಿ, ನಮ್ಮ ಮಂತ್ರಿಯಾದ ಸುಮಂತ್ರನು-ಅಯ್ಯೋ ! ರಾಮಾ ! ನಿನಗೀಸ್ಥಿತಿಯು ಬಂದಿತೇ ? ಓ ಕೈಕೇಯೀ ! ನಿನ್ನ ಕಾಮ, ವು ಕೈಗೂಡಿತೇ ? ಎಂದು ಮೋರೆಗೆ ಸೆರಗನ್ನಿಟ್ಟು, ಕಣ್ಣಿನಿಂದ ನೀರ ನ್ನು ಸುರಿಸುತ್ತಾ, ಗಟ್ಟಿಯಾಗಿ ಗೊಳೋ ಎಂದು ಅತ್ತುದು ಇಲ್ಲಿಯೇ.

ಯಕ್ಷಾಂಗನೆಯರ ಜಲಕ್ರೀಡೆಗೆಡೆಯೆನಿಸಿ, ಹೇಮಾಂಬುಜಗಳಿಗಾ ಕರವಾದ ಬ್ರಹ್ಮಸರೋವರವಿಲ್ಲಿ ಕಾಣಬರುತಲಿದೆನೋಡು, ಬುದ್ಧಿಗೆ ಅವ್ಯಕ್ತವೆಂಬ ಪ್ರಧಾನವು ಕಾರಣವಾಗಿರುವ ಹಾಗೆ, ಸರಯೂನದಿಗೆ ಈ ಮಾನಸ ಸರವು ಮೂಲಕಾರಣವೆಂದು ಆಪ್ತವಚನಗಳೆನಿಸಿದ ವೇ ದಗಳೂ, ವೇದವಿದರೆನಿಸಿದ ಮುನಿಗಳೂ ಹೇಳುತ್ತಾರೆ.

ಇತ್ತ ತಿರುಗಿನೋಡು, ಇದೇ ಅಯೋಧ್ಯಾರಾಜಧಾನಿಯ ಬಳಿ ಯಲ್ಲಿ ಹರಿಯುತಲಿರುವ ಸರಯೂನದಿ. ಪಶುಬಂಧಕ್ಕೆ ಉಪಯೋಗಿ ಸಿದ ಯೂಪಸ್ತಂಭಗಳು ಇದರ ತೀರದಲ್ಲಿ ಸಾಲಾಗಿ ಕಾಣಬರುತ ಲಿವೆ. ಇಕ್ಷ್ವಾಕುಮಹಾರಾಯನ ವಂಶದಲ್ಲಿ ಜನಿಸಿದ ಬಹುಮಂದಿ ನಮ್ಮ ಹಿರಿಯರು - ಅನೇಕ ಸಲ ಅಶ್ವಮೇಧಗಳನ್ನಾಚರಿಸಿ, ಅವಭೃ ಥಸ್ನಾನಗಳನ್ನು ಮಾಡಿದುದರಿಂದ ಈ ಮಹಾನದೀಜಲಗಳನ್ನು ಮತ್ತ ಷ್ಟು ಪಾವನ ತರಗಳನ್ನಾಗಿ ಮಾಡಿರುವರು. ಈ ತರಂಗಿಣಿಯ ತೀರ ದ ಮಳಲುನೆಲದಲ್ಲಿಯೇ ನಮ್ಮವರೆಲ್ಲರೂ ಬೆಳೆದುದು, ಭೂರಿಪಯೋ

ದಾನದಿಂದ ಆ ಉತ್ತರ ಕೋಸಲೇಶ್ವರರೆಲ್ಲರನ್ನೂ ಸುಖವಾಗಿ ಪೋಷಿಸಿ ಸರ್ವರಿಗೂ ಸಮಾನವಾದ ತಾಯಿ ಎನಿಸಿಕೊಂಡಿರುವುದು. ಅದರಿಂದಲೇ ನನ್ನ ಮನವೂ ಈ ವಾಹಿನಿಯನ್ನು ಜನನಿಯಂತೆ ಭಾವಿಸಿ ಗೌರವಿಸುತಲಿದೆ. ಈ ಮಹಾಪಗೆಯು – ಈಗ ನಮ್ಮ ತಾಯಿಯಾದ ಕೌಶಲ್ಯೆಯಹಾಗೆ, ಪೂಜ್ಯನಾದ ನಮ್ಮ ತಂದೆಯಾದ ದಶರಥನನ್ನು ಅಗಲಿರುತ, ಬಹುದಿವಸಗಳಿಂದ ಅರಣ್ಯವಾಸಿಯಾಗಿದ್ದು ಹಿಂದಿರುಗಿ ಬರುತಲಿರುವ ಈ ನನ್ನನ್ನು ಈಗ ದೂರದಿಂದಲೇ ಕನಿಕರಪಟ್ಟು ತಹತಹಪಡುತ, ತಂಗಾಳಿಯನ್ನೊಳಗೊಂಡಿರುವ ತನ್ನ ತೆರಗಳೆಂಬ ಕರಗಳಿಂದ ಬಾಚಿ ಅಪ್ಪಿಕೊಳ್ಳಲೆಳಸುವಂತಿದೆ.

ಪ್ರಿಯೆ ! ಅಲ್ಲಿನೋಡು— ನೆಲದಿಂದೆದ್ದು, ಸಂಜೆಯಂತೆ ಬಲು ಕೆಂಪಾಗಿ, ಮುಗಿಲನ್ನು ಮುಟ್ಟುತಲಿರುವ ಧೂಳಿಯು— ದೂರದಲ್ಲಿ ಕಾಣಬರುತಲಿದೆ. ಓಹೋ ! ಸರಿ. ಹನುಮಂತನಾಗಲೆ ಮುಂದೆ ಹೋಗಿ ನಮ್ಮಬರುವಿಕೆಯ ಸುದ್ದಿಯನ್ನು ಸೂಚಿಸಿ ಇದಾನೆ. ಅದರಿಂದಲೇ ಭರತನು ಸೇನಾಸಮೇತನಾಗಿ ನಮ್ಮನ್ನು ಇದಿರ್ಗೊಳ್ಳಲಿಕ್ಕೆ ಬರುತಲಿದಾನೆಂದು ಊಹಿಸುತ್ತೇನೆ. ಹಿಂದೆ ಕಾಡಿನಲ್ಲಿ ಖರಾದಿಗಳನ್ನಿರಿದು ಬಂದ ನನಗೆ ಲಕ್ಷ್ಮಣನು ನಿನ್ನನ್ನು ಒಪ್ಪಿಸಿದ ಹಾಗೆ, ಈಗ ದಶಗಳನೇ ಮೊದಲಾದ ಹಗೆಗಳನ್ನು ಕೊಂದು ಬರುವ ಈ ನನಗೆ, ಭರತನು — ಇದುವರೆಗೂ ಅನುಭವಿಸದೆಯೇ ಪಾಲಿಸುತಲಿದ್ದ ರಾಜ್ಯಲಕ್ಷ್ಮಿಯನ್ನು ಸಮರ್ಪಿಸಲಿಕ್ಕೆ ಸಿದ್ಧನಾಗಿ ಬರುತಲಿರುವುದೇ ದಿಟ. ಕುಲಗುರುವಾದ ವಸಿಷ್ಠಮುನಿಯು ಮುಂದೆ ಬರುತಲಿದಾನೆ. ಆತನ ಹಿಂದೆ ಪೂಜಾಪಾತ್ರೆಯನ್ನು ಪಾಣಿಯಲ್ಲಿ ಧರಿಸಿ, ಚೀರಾಂಬರನಾಗಿ ಮುನಿವೃತ್ತಿಯಿಂದಿರುವ ಭರತನು ಪಾದಚಾರಿಯಾಗಿ ಬರುತಲಿರುವನು. ಮುದುಕರಾದ ಮಂತ್ರಿಗಳು ಇಕ್ಕೆಲದಲ್ಲಿ ಬರುತಲಿದಾರೆ, ಪಡೆಯು ಹಿಂಬಾಲಿಸಿ ಬರುತಲಿದೆ. ತಂದೆಯೂ ಕೊಟ್ಟು, ಕೈಗೂ ದೊರೆತು, ತಾನುತರುಣನೂ ಆಗಿದ್ದರೂ, ಅನುಭವಿಸದೆ, ಭರತನು— ಅಂತಹ ರಾಜ್ಯಲಕ್ಷ್ಮಿಯನ್ನು ಮನಃಪೂರ್ವಕವಾಗಿ ತೊರೆದಿರುವುದನ್ನು ನೋಡಿದರೆ, ನನಗೋಸ್ಕರವಾಗಿ ಆಕೆಯೊಡನೆ ಹದಿನಾಲ್ಕು

ವರ್ಷಗಳಿಂದಲೂ ತೀವ್ರವಾದ ಅಸಿಧಾರಾವ್ರತವನ್ನು ಅಭ್ಯಾಸಮಾಡುತ ಲಿರುವಂತೆ ತೋರುತಲಿದೆ.

ಇಂತು ದಾಶರಥಿಯು - ವೈದೇಹಿಯೊಡನೆ ಮಾತನಾಡುತಲಿರುವಲ್ಲಿ - ವಿಮಾನಾಧಿದೇವತೆಗೆ ರಾಮನ ಮನೋಗತವು ಗೊತ್ತಾಯಿತು ಆ ದೇವತೆಯಿಂದ ಪ್ರೇರಿತವಾದ ಪುಷ್ಪಕವು ಜ್ಯೋತಿರ್ಮಾರ್ಗದಿಂದ ಕೆಳಗೆ ಇಳಿಯುತಲಿದ್ದಿತು. ಭರತಾನುಚರರಾದ ಪ್ರಜೆಗಳೆಲ್ಲರೂ ತಲೆಗಳನ್ನೆತ್ತಿ ಆಶ್ಚರ್ಯದೊಡನೆ ನೋಡುತಲಿದ್ದರು. ದಿವ್ಯರಥವು ನೆಲದಹತ್ತಿರಕ್ಕೆ ಇಳಿಯಿತು. ಸೇವೆಯಲ್ಲಿ ಜಾಣನೆನಿಸಿದ ಹರೀಶ್ವರನಾದ ಸುಗ್ರೀವನು ಹಸ್ತಲಾಘವವನ್ನು ಕೊಟ್ಟನು. ವಿಭೀಷಣನು ಮುಂದಾಳಾಗಿ ದಾರಿಯನ್ನು ತೋರುತಲಿದ್ದನು. ಸ್ಫಟಿಕಮಣಿಮಯವಾದ ಸೋಪಾನದ ಹಾದಿಯಿಂದ ರಾಮನು ಕೆಳಗೆ ಇಳಿದನು. ಇಕ್ಷ್ವಾಕು ಕುಲಗುರುವಾದ ವಶಿಷ್ಠಮುನಿಗೆ ವಿಧೇಯತೆಯಿಂದ ಮಣಿದನು, ಅರ್ಘ್ಯವನ್ನು ಸ್ವೀಕರಿಸಿದ ಕೂಡಲೆ ಕರತಲದಿಂದ ತಮ್ಮನಾದ ಭರತನನ್ನು ಬಾಚಿ ಗಟ್ಟಿಯಾಗಿ ಅಪ್ಪಿಕೊಂಡನು ಮತ್ತು - ಪಿತೃರಾಜ್ಯ ಮಹಾಭಿಷೇಕವನ್ನು ತನ್ನಲ್ಲಿರುವ ಭಕ್ತಿಯಿಂದ ತೊರೆದಿರುವ ಅವನ ಮುಂದಲೆಯನ್ನು ಆನಂದ ಬಾಷ್ಪಬಿಂದುಗಳನ್ನುದಿರಿಸುತ ಮೂಗಿನಿಂದ ಆಘ್ರಾಣಿಸಿದನು. ಬಳಿಕ ರೋಮಗಳ ಬೆಳವಳಿಗೆಯಿಂದ ಮುಖವಿಕಾರವನ್ನು ಪಡೆದು, ಬಿಳಲುಗಳಿಂದೊಡಗೂಡಿದ ಆಲದ ಮರಗಳಂತಿರುವ ವೃದ್ಧ ಮಂತ್ರಿಗಳು ನಮಸ್ಕರಿಸಿದರು. ಕರುಣಾರಸಪೂರ್ಣವಾದ ದೃಷ್ಟಿಯನ್ನು ಅವರಲ್ಲಿ ಹರಡುತ್ತಾ, ಮೃದುಮಧುರವಾದ ಮಾತುಗಳಿಂದ ಕ್ರಮವಾಗಿ ಕುಶಲ ಪ್ರಶ್ನೆ ಮಾಡುತ ಅನುಗ್ರಹಿಸಿದನು

ಆ ಮೇಲೆ ,,ಋಕ್ಷ ಹರೀಶ್ವರನಾದ ಈ ಸುಗ್ರೀವನು ಆಪದ್ಬಂಧುವಾಗಿದ್ದನು. ಸಮರಭೂಮಿಯಲ್ಲಿ ಈ ವಿಭೀಷಣನೇ ಮುಂದಾಳಾಗಿ ಹಗೆಗಳನ್ನು ಹೊಡೆದವನು,, ಎಂದು ರಘುನಂದನನು-ಆದರದಿಂದ ತೋರಲು, ಭರತನು-ಲಕ್ಷ್ಮಣನನ್ನು ಅನುಜನಾಗಿದ್ದರೂ ಅತಿಕ್ರಮಿಸಿ, ಸುಗ್ರೀವ ವಿಭೀಷಣರನ್ನು ಅಲಿಂಗನಾದಿಗಳಿಂದಅಭಿನಂದಿಸುತ ಅಭಿವಂದಿಸಿದನು.

ತರುವಾಯ ಲಕ್ಷ್ಮಣನು-ಬಾಗಿದ ಶಿರವುಳ್ಳವನಾಗಲು, ಭರತನು ಅವನನ್ನು ಎರಡು ಕೈಗಳಿಂದಲೂ ಬಾಚಿ ಮೇಲಕ್ಕೆತ್ತಿ, ಇಂದ್ರಾರಿಯು

ಶರಪ್ರಹಾರಗಳಿಂದ ಗಾಯುವಾಗಿ, ಮಾಗಿ, ಜಡ್ಡುಗಟ್ಟಿರುವ ಅವನ ಎದೆಯು ಚರ್ಮದ ಗಂಟುಗಳಿಂದ ತನ್ನ ವಕ್ಷಸ್ಥಲಕ್ಕೆ ಕ್ಲೇಶವುಂಟಾಗುವವರೆಗೂ ಗಟ್ಟಿಯಾಗಿ ತಬ್ಬಿಕೊಂಡನು. ಆದರೂ ಅವನ ಪ್ರೀತಿಯು ತಣಿಯಲೇ ಇಲ್ಲ.

ಆ ಮೇಲೆ-ರಾಮಾಜ್ಞೆಯಿಂದ ಕಪಿಪತಿಗಳೆಲ್ಲ ಮನುಷ್ಯಾಕಾರರಾಗಿ ಆನೆಗಳನ್ನೇರಿದರು. ಮದೋದಕಧಾರೆಗಳನ್ನು ವರ್ಷಿಸುತಲಿರುವ ಗಜೇಂದ್ರಗಳಿಂದ ವಾನರಯೂಥಪತಿಗಳು ಪರ್ವತಾರೋಹಣದ ಸುಖವನ್ನು ಅನುಭವಿಸುತ ಬಂದರು. ನಿಶಾಚರೇಶ್ವರನಾದ ವಿಭೀಷಣನೂ ತನ್ನನುಚರರಿಂದ ಸಹಿತನಾಗಿ, ದಶರಥನಂದನನ ಆಜ್ಞಾನುಸಾರವಾಗಿ ಆತನು ತೋರಿದ ತೇರನ್ನೇರಿದನು ಆದರೆ ವಿಭೀಷಣನ ರಥಗಳು ಮಾಯಾಕಲ್ಪಿತವಾದ ವಿವಿಧವಿಚಿತ್ರರಚನೆಗಳುಳ್ಳುವಾದರೂ, ದಶರಥರಥಗಳ ಶೋಭೆಗೆಣೆಯೆನಿಸಲಾರದಿದ್ದುವು

ತದನಂತರ- ಬುಧಬೃಹಸ್ಪತಿಗಳಿಂದ ಸುಂದರನೆನಿಸಿದ ಚಂದ್ರನು ಇರುಳುಹೊತ್ತಿನಲ್ಲಿ ಮಿಂಚಿನಿಂದೆಸೆವ ಮೇಘ ಮಂಡಲವನ್ನು ಹೇಗೋ ಹಾಗೆ, ಶ್ರೀರಾಮನೂ ಲಕ್ಷ್ಮಣ ಶತ್ರುಘ್ನರಿಂದ ಸಹಿತನಾಗಿ, ಶೋಭಿಸುತಲಿರುವ ಪತಾಕೆಯಿಂದ ಕಾಮಗಾಮಿಯಾಗಿರುವ ಅಂದವಾದ ವಿಮಾನವನ್ನೇರಿದನು. ಆ ದಿವ್ಯ ವಿಮಾನದಲ್ಲಿ-ಜಗನ್ನಾಥನಾದ ಆದಿವರಾಹಮೂರ್ತಿಯಿಂದ ಪ್ರಲಯುವನ್ನು ತಪ್ಪಿಸಿ ಉದ್ಧಾರವನ್ನು ಪಡೆದ ಭೂದೇವಿಯು ಹಾಗೂ, ಶರದಾರಂಭದಿಂದ ಮೇಘಮಂಡಲವನ್ನು ಬಿಟ್ಟು ಹೊರಗೆ ಬಂದ ಚಂದ್ರಿಕೆಯು ಹಾಗೂ, ರಾಮನಿಂದ ರಾವಣನಿಂದ ಸಂಕಟದಿಂದ ಬಿಡಿಸಲ್ಪಟ್ಟು, ಸಂತೋಷವುಳ್ಳವಳಾಗಿರುವ ಮೈಥಿಲಿಯನ್ನು ಭರತನು ವಂದಿಸಿದನು ಆಗ-ರಾವಣನು ತನ್ನ ತಲೆಗಳನ್ನೊತ್ತಿ ಬೇಡಿದರೂ ತಿರಸ್ಕರಿಸಿ, ವೀರಪಾತಿವ್ರತ್ಯವನ್ನೊಳಗೊಂಡು, ಪೂಜ್ಯವೆನಿಸಿದ ಜಾನಕಿಯ ಚರಣಯುಗ್ಮವು, ಅಣ್ಣನನುಸರಣೆಯಿಂದ ಜಡೆಯನ್ನು ಧರಿಸಿದ್ದ ಸಜ್ಜನನಾದ ಭರತನಶಿರವು, ಈ ಎರಡೂ ಕಲೆತು, ಒಂದನ್ನೊಂದು ಪಾವನಗೊಳಿಸುವಂತಿದ್ದುವು

ಇಂತು ಪೂಜ್ಯನಾದ ರಾಮನು ಸಕಲ ಪ್ರಜೆಗಳಿಂದ ಸಹಿತನಾಗಿ ಪುಷ್ಪಕವಿಮಾನದಿಂದ ಮುಲ್ಲಿಗೆ ಅರೆಗಾವುದದ ದಾರಿಯನ್ನು ತೆರಳಿ,

ಉದಾರವೆನಿಸಿದ ಅಯೋಧ್ಯಾನಗರದ ಸಮೀಪೋದ್ಯಾನದಲ್ಲಿ, ಶತ್ರುಘ್ನನು ಅಣಿಮಾಡಿಸಿದ್ದ ಗೂಡಾರಗಳಲ್ಲಿ ಇಳಿದನು

— ಇಂತು ದಂಡಕಾಪ್ರತ್ಯಾಗಮನನೆಂಬ ಹದಿಮೂರನೆಯ ಸರ್ಗಂ —

— ಶ್ರೀರಾಮುಚನ್ದ್ರಾಯನಮಃ —

## — ಹದಿನಾಲ್ಕನೆಯ ಅಧ್ಯಾಯಂ —

ಸೂಚನೆ.--ಇಳೆಗಾಶ್ಚರ್ಯನೆನಿಸೆ ರಾಮುಂ। ಕಳಕಳಿಸಿದುದುಗಡ ರಾಜ್ಯದೈಸಿರಿಯಾಗಳ್
ಗಳಿಪಂ ಕೇಳ್ದಾ ಸತಿಯುಂ। ಕಳುಪಿದನಾ ರಾಮ ನಂದು ಕಾಡಿಗೆ ಧೀರಂ॥

ಇತ್ತ ಅಯೋಧ್ಯಾನಗರದಲ್ಲಿ-ಆಸರೆಯಾಗಿದ್ದ ಮರವು ಮುರಿದು ಬೀಳಲು, ಅದರ ಮೇಲೆ ಹಬ್ಬಿದ್ದ ಬಳ್ಳಿಗಳಂತೆ, ಪತಿಯು ಗತಿಸಿದ ಮೇಲೆ ಮಹಾರಾಣಿಯರಿಬ್ಬರೂ ಬಹು ಶೋಚನೀಯವಾದ ಅವಸ್ಥೆಯನ್ನು ಹೊಂದಿ ಇರುತ್ತಿದ್ದರಷ್ಟೆ ? ಈಗ ತಮ್ಮ ಮಕ್ಕಳೆಲ್ಲರೂ ಒಟ್ಟಿಗೆ ಬಂದು ಪುರೋದ್ಯಾನದಲ್ಲಿ ಇಳಿದಿರುವರೆಂಬ ಸುದ್ದಿಯು ತಿಳಿಯಿತು, ಕೂಡಲೆ ಆ ಕೌಸಲ್ಯಾಸುಮಿತ್ರೆಯರಿಬ್ಬರೂ ಜೊತೆಯಾಗಿ ಬಂದು, ರಾಮಲಕ್ಷ್ಮಣರನ್ನು ಒಟ್ಟಿಗೆ ಕಂಡರು. ಹಗೆಗಳನ್ನಿರಿದು, ವಿಕ್ರಮದಿಂದ ಶೋಭಿಸುತಲಿರುವ ಆ ಇಬ್ಬರು ಮಕ್ಕಳೂ ಈರ್ವರು ತಾಯಿಯರಿಗೆ ಕ್ರಮವಾಗಿ ಮಣಿದರು ಮಾತೆಯರಾದರೆ ನೀರುತುಂಬಿದ ಕಣ್ಣುಗಳಿಂದ ಮನವಾರ ಅವರನ್ನು ನೋಡಿ ಸ್ಪಷ್ಟವಾಗಿ ತಿಳಿಯಲಿಕ್ಕಾಗದೆಯೇ ಹೋಯಿತು. ಕರತಲಗಳಿಂದ ಚೆನ್ನಾಗಿ ಮೈತಡವಿ ಆ ಸುಖಾನುಭವದಿಂದ ಅರಿತರು ಬೇಸಗೆಯ ಬಿಸಿಲಿನ ಬೇಗೆಯಿಂದ ಸುಡುತಲಿರುವ ಗಂಗಾಸರಯೂಜಲವನ್ನು, ಹಿಮಗಿರಿಯಿಂದ ಕರಗಿ ಹರಿದುಬರುವ ತೋಯವು ಹೇಗೋ ಹಾಗೆ, ಆ ಜನನಿಯರ ಕಣ್ಣುಗಳಿಂದ ಹೊರಟ ಆನಂದಬಾಷ್ಪವು-ಶೋಕದಿಂದ ಉಂಟಾಗಿದ್ದ ಬಿಸಿನೀರನ್ನು ತಣ್ಣಗೆ ಮಾಡಿತು. ರಕ್ಕಸರ ಕಣೆಗಳ ಪೆಟ್ಟುಗಳಿಂದುಂಟಾಗಿ ಮಾಯ್ದಿರುವ ಮಕ್ಕಳ ಮೈಗಳೊಳಗಣ ಗಾಯಗಳನ್ನು ತಡವಿ ಒಲುಕನಿಕರದಿಂದ ಮುಟ್ಟಿಮುಟ್ಟಿ ನೋಡಿದರು, ಆದರೆ ಅವು ಆ ತಾಯಿಯರಿಗೆ ಹಸಿಯ ಗಾಯಗಳಾಗಿಯೇ ತೋರಿದುವು. ಆಗಲವರು-ಅಯ್ಯೋ ! ಕ್ಷತ್ರಕುಲಾಂಗನೆಯರಿಗೆ ಮಕ್ಕಳಾಗಬೇಕೆಂಬ ಬಯಕೆಯಿದ್ದರೂ, ವೀರಮಾತೆಯರೆಂಬ ಹೆಸರು ಅವರಿಗೆ ಬರಬಾರದು ಎಂದುಕೊಂಡರು.

ತರುವಾಯು—'ಗಂಡನಿಗೆ ಕರಕರೆಯನ್ನುಂಟುಮಾಡಿದ ಅವಲಕ್ಷಣದ ಹೆಂಗಸು ಇವಳೇಸೀತೆ' ಎಂದು ತನ್ನ ಹೆಸರನ್ನು ಹೇಳುತ್ತಾ, ಜಾನಕಿಯು-ಸ್ವರ್ಗಗತನಾಗಿರುವ ಮಾವನಿಗೆಪತ್ನಿಯರಾದ ಅತ್ತೆಯರಿಬ್ಬರಿಗೂ ಭಕ್ತಿಭೇದವಿಲ್ಲದೆ ಅಡ್ಡಬಿದ್ದಳು. ಮಗೂ! ಮೇಲಕ್ಕೆ ಏಳಮ್ಮಾ ! ಪತಿಯಾದ ರಾಮನು-ತಮ್ಮನಾದ ಲಕ್ಷ್ಮಣನೊಂದಿಗೆ ಮಹತ್ತರವಾದ ಕಷ್ಟವನ್ನು ದಾಟಿದುದು ನಿನ್ನ ಪಾವನ ಚರಿತ್ರೆಯಿಂದಲೇ ಅಲ್ಲವೆ ? ಎಂದು ಪ್ರಿಯವಾಗಿದ್ದರೂ ಸತ್ಯವಾಗಿಯೇ ಇರುವ ಮಾತನ್ನು ಹೇಳುತ್ತಾ, ಪ್ರೀತಿಪಾತ್ರಳಾದ ಸೊಸೆಯನ್ನು ಪರಮಾದರದಿಂದ ಬಾಚಿ ಅಪ್ಪಿಕೊಂಡರು.

ಆ ಹಿಂದೆ ತಾಯಿಯರಾದ ಕೌಸಲ್ಯಾಸುಮಿತ್ರೆಯರೇ-ರಘುಕುಲತಿಲಕನಾದ ರಾಮನ ಶಿರದ ಮೇಲೆ ಆನಂದ ಬಾಷ್ಪಧಾರೆಯನ್ನು ಕರೆದು, ಪಟ್ಟಾಭಿಷೇಕಮಂಗಳವನ್ನು ಪ್ರಾರಂಭಿಸಿದ್ದರು. ಬಳಿಕ ವೃದ್ಧಮಂತ್ರಿಗಳು-ಗಂಗೆಯೇ ಮೊದಲಾದ ಮಹಾನದೀಜಲಗಳನ್ನು ಸುವರ್ಣಕುಂಭಗಳಿಂದ ತರಿಸಿ, ಆ ಅಭಿಷೇಕೋತ್ಸವವನ್ನು ಕ್ರಮಪ್ರಕಾರ ಹೀಗೆ ನೆರವೇರಿಸಿದರು:—

ವಿಭೀಷಣನ ಕಡೆಯವರಾದ ರಾಕ್ಷಸರೂ, ಸುಗ್ರೀವನ ಕಡೆಯವರಾದ ವಾನರರೂ, ಪೂರ್ವಾದಿ ಸಮುದ್ರಗಳಿಂದಲೂ, ಗಂಗಾದಿ ಸರಿತ್ತುಗಳಿಂದಲೂ ದಿವ್ಯ ತೀರ್ಥಗಳನ್ನು ತಂದರು. ಮಂತ್ರಪೂತಗಳಾದ ಆ ಜಲಬಿಂದುಗಳು-ಜಯಶೀಲನಾದ ರಘುನಂದನನ ಮಂಗಳ ಮೂರ್ಧದ ಮೇಲೆ ವಿಂಧ್ಯಪರ್ವತದ ಮೇಲೆ ಮೇಘಪ್ರಭವ ಬಿಂದುಗಳಂತೆ ಪ್ರೋಕ್ಷಿಸಲ್ಪಟ್ಟವು. ರಾಮಚಂದ್ರನು ತಾಪಸವೇಷವನ್ನುಳವಟ್ಟಿರುವಾಗಲೂ ನೋಡಲಿಕ್ಕೆ ಅತ್ಯಂತ ಸುಂದರನಾಗಿಯೇ ಇರುತ್ತಿದ್ದನು. ರಾಜೇಂದ್ರಾಲಂಕಾರವನ್ನು ಧರಿಸಿದ ಆತನ ಶೋಭೆಯು ಅಪರಿಮಿತವಾಗಿದ್ದಿತೆಂದರೆ ಪುನರುಕ್ತಿಯಾಗುವುದು. ಒರಿಸೆಯಾಗಿ ಸೇನೆಯೂ ಹೊರಟಿತು, ರಾಕ್ಷಸರ ದಳದಿಂದಲೂ, ಹರಿಗಳ ಪಡೆಯಿಂದಲೂ ಮಂತ್ರಿವೃದ್ಧರು ಹಿಂಬಾಲಿಸಿದರು ಬಗೆಬಗೆಯ ತೋರಣಾಲಂಕಾರವು ದಾರಿಯುದ್ದಕ್ಕೂ ಕಂಗೊಳಿಸುತಲಿದ್ದಿತು, ಇಕ್ಕೆಲದ ಸೌಧಗಳ ಜಾಲಮಾರ್ಗಗಳಿಂದ ಲಾಜವೃಷ್ಟಿಯು ಸುರಿಯುತಲಿದ್ದಿತು, ರಘು

ರಾಜೇಂದ್ರನು-ಮೆರವಣಿಗೆಯಿಂದ ಹೊರಟು, ವಂಶಾನುಕ್ರಮವಾಗಿ ಬಂದಿರುವ ರಾಜಧಾನಿಯನ್ನು ಪ್ರವೇಶಿಸುತಲಿದ್ದನು, ರಥದೊಳಗೆ ಉಭಯಪಾರ್ಶ್ವಗಳಲ್ಲಿಯೂ ನಿಂತು ಲಕ್ಷ್ಮಣ ಶತ್ರುಘ್ನರು-ದಿವ್ಯಚಾಮರಗಳನ್ನು ಹಿಡಿದು ಸೇವಿಸುತಲಿದ್ದರು. ಭರತನು-ಹಿಂದುಗಡೆಯಲ್ಲಿ ನಿಂತು ಬೆಳ್ಗೊಡೆಯನ್ನು ಹಿಡಿದಿದ್ದನು, ಹೀಗೆ ನಾಲ್ಕು ಅವಯವಗಳ ರೂಪವಾಗಿರುವ ರಾಮನು-ಸಶರೀರವಾದ ಸಾಮಾದ್ಯುಪಾಯಗಳ ರಾಶಿಯಂತೆ ಪುರಪ್ರವೇಶಮಂಗೈದನು. ಪುರದೊಳಗಣ ಪ್ರಾಸಾದದ ಮೇಲೆ ವಾಯುವಶದಿಂದ ಹೊರಡುತಲಿದ್ದ ಅಗುರುಧೂಮರೇಖೆಯು-ಇಷ್ಟು ದಿವಸವೂ ಸಂಸ್ಕಾರವಿಲ್ಲದೆ ಕಿರಿಯಾಗಿದ್ದು, ವನದಿಂದ ಹಿಂದಿರುಗಿ ಬಂದ ರಾಮನಿಂದ ಬಿಡಿಸಲ್ಪಟ್ಟಿರುವ ಅಯೋಧ್ಯಾನಗರೀನಾರಿಯ ಜಡೆಯಂತೆ ಕಂಗೊಳಿಸುತಲಿದ್ದಿತು ಅತ್ತೆಯರಿಂದ ಬಲು ಅಂದವಾಗಿ ಸಿಂಗರಿಸಲ್ಪಟ್ಟು, ಹೆಂಗಸರಿಗೆ ಯೋಗ್ಯವಾಗಿರುವ ಚಿಕ್ಕ ರಥದಲ್ಲಿ ಕುಳಿತು ಬರುತಲಿರುವ ರಘುವೀರಪತ್ನಿಯಾದ ಜಾನಕಿಗೆ ಇಕ್ಕೆಲದ ಉಪ್ಪರಿಗೆಗಳ ಮೇಲೆ ಗವಾಕ್ಷಗಳೊಳಗೆ ನಿಂತು ಅಕ್ಕರೆಯಿಂದ ನೋಡುತಲಿರುವ ಸಾಕೇತಪುರವನಿತೆಯರು-ಸ್ಪಷ್ಟವಾಗಿ ತಿಳಿಯುವಂತೆ ಕರಗಳನ್ನು ಜೋಡಿಸಿದ ಅಂಜಲಿಗಳಿಂದ ಪ್ರಣಾಮವನ್ನೊಪ್ಪಿಸುತಲಿದ್ದರು. ಪತಿವ್ರತಾ ಶಿರೋಮಣಿಯೆನಿಸಿರುವ ವೃದ್ಧಪುರಂಧ್ರಿಯಾದ ಅನಸೂಯಾದೇವಿಯು ಕೊಟ್ಟದ್ದ ಶ್ರೇಷ್ಠತರವೆನಿಸಿದ ಅಂಗರಾಗವನ್ನು ವೈದೇಹಿಯು ತನ್ನ ಮೈಗೆ ಲೇಪಿಸಿಕೊಂಡಿದ್ದಳು. ಆಕೆಯ ಸುತ್ತಲೂ ಅದರ ಹೊಳವು ತಳತಳನೆ ಅಖಂಡವಾಗಿ ಹೊಳೆಯುತಲಿದ್ದಿತು ಇದರಿಂದ ರಾಮನು- ತನ್ನ ಧರ್ಮಪತ್ನಿಯನ್ನು ಮರಳಿ ಅಗ್ನಿ ಪ್ರವೇಶವನ್ನು ಮಾಡಿಸಿ ಪರಿಶುದ್ಧಳಾಗಿರುವಳೆಂಬುದನ್ನು ಅಯೋಧ್ಯಾನಗರಿಗೆ ತೋರಿಸುತಲಿರುವನೆಂಬಂತೆ ಕಾಣಬರುತಲಿದ್ದಿತು.

ತರುವಾಯ ಸಹೃದಯನಾದ ರಾಮನು- ಸುಹೃದರಾದ ಸುಗ್ರೀವನೇ ಮೊದಲಾದವರಿಗೆ ಸಕಲೋಪಕರಣಗಳಿಂದ ಸಿದ್ಧಪಡಿಸಿರುವ ಬಿಡಾರಗಳನ್ನು ತೋರಿಸಿ, ಆಮೇಲೆ ತಾನು- ಪೂಜಾರ್ಹಸಾಮಗ್ರೀಸನಾಥವಾಗಿ, ಚಿತ್ರಪಟದಲ್ಲಿ ಮಾತ್ರವೇ ಉಳಿದಿರತಕ್ಕ ತನ್ನ ತಂದೆಯ ಮನೆಯನ್ನು ಕಣ್ಣುಗಳಿಂದ ನೀರನ್ನು ತೊಟ್ಟಿಡಿಸುತ ಹೊಕ್ಕನು.

ಅಲ್ಲಿ-ಬದ್ಧಾಂಜಲಿಯಾಗಿನಿಂತು, 'ಎಲೌ ತಾಯೇ ! ನಮ್ಮ ತಂದೆಯು-ಸ್ವರ್ಗಫಲವನ್ನು ಕೊಡುವ ಸತ್ಯದಿಂದ ಜಾರಿಬೀಳದಿರಲಿಕ್ಕೆ ಮೂಲಕಾರಣವನ್ನು ನಿಜವಾಗಿ ಯೋಚಿಸಿದರೆ ನಿನ್ನ ಸುಕೃತವಲ್ಲದೆ ಬೇರಲ್ಲ,, ಎಂದು ವಂದಿಸಿ ಹೇಳುತ್ತಾ, ಭರತನ ತಾಯಿಯ ನಾಚಿಕೆಯನ್ನು ಪರಿಹರಿಸಿದನು. ಬಳಿಕ ಸಂಕಲ್ಪಮಾತ್ರದಿಂದ ಬೇಕಾದ ಭೋಗ್ಯಪದಾರ್ಥಗಳ ಸಿದ್ಧಿಯನ್ನು ಪಡೆಯುವ ಸುಗ್ರೀವ ವಿಭೀಷಣ ಮೊದಲಾದವರು ವಿಸ್ಮಯಗೊಳ್ಳುವಂತೆ ಉಪಚಾರಗಳ ವೈಖರಿಗಳನ್ನು ನೆರವೇರಿಸಿದನು.

ಅನಂತರದಲ್ಲಿ-ಸಭೆಯನ್ನಲಂಕರಿಸಿ, ಶತ್ರುಸಂಹಾರವನ್ನು ಮಾಡಿ ಬಂದಿರುವ ತನ್ನನ್ನು ಬಹುಮಾನಿಸಲಿಕ್ಕೆಂದು ಬಂದ ಅಗಸ್ತ್ಯನೇ ಮುಂತಾದ ದಿವ್ಯಮುನಿಗಳಿಂದ ತನ್ನ ವಿಕ್ರಮಕ್ಕೆ ಗೌರವವನ್ನುಂಟುಮಾಡತಕ್ಕದಾಗಿರುವ ಹಗೆಗಳಾದ ರಾವಣಾದಿಗಳ ಜನ್ಮ ದಿಗ್ವಿಜಯಗಳೇ ಮೊದಲಾದ ಚಿತ್ರಚರಿತ್ರಗಳನ್ನು ಕೇಳಿದನು. ಬಹಳವಾಗಿ ಅಭಿನಂದಿಸಿದ ತಪೋಧನರೆಲ್ಲ ಉಚಿತ ಸತ್ಕಾರಗಳನ್ನು ಪಡೆದು ತೆರಳಿದರು. ಸುಖಾತಿಶಯದಿಂದ ಅರಿವಿಗೆ ಬಾರದೆಯೇ ಮತ್ತೆ ಹದಿನೈದು ದಿವಸಗಳ ಕಾಲವನ್ನು ಕಳೆದ ಸುಗ್ರೀವ ವಿಭೀಷಣ ಪ್ರಭೃತಿಗಳಿಗೆ, ರಾಮನು-ಸೀತೆಯ ಕರತಲದಿಂದಲೇ ಉತ್ತಮ ಸನ್ಮಾನಗಳನ್ನು ನೆರವೇರಿಸಿ, ಆ ರಕ್ಷಃಕಪೀಂದ್ರರನ್ನೆಲ್ಲ ತಂತಮ್ಮ ಸ್ಥಾನಗಳಿಗೆ ಕಳುಹಿಸಿಕೊಟ್ಟನು. ನೆನೆದಮಾತ್ರದಲ್ಲಿ ಇಷ್ಟಪಟ್ಟ ಸ್ಥಳಕ್ಕೆ ತೆರಳತಕ್ಕುದೂ, ರಾವಣನ ಜೀವಿತದೊಡನೆ ಅಪಹರಿಸಲ್ಪಟ್ಟುದೂ, ಆಕಾಶಕ್ಕೆ ಪುಷ್ಪದಂತೆ ಆಭರಣವೆನಿಸಿದುದೂ ಆಗಿರುವ ಪುಷ್ಪಕವಿಮಾನವನ್ನು ಮರಳಿ ಕೈಲಾಸನಾಥನಾದ ಕುಬೇರನಿಗೆ ವಾಹನವಾಗಿರುವಂತೆ ಅನುಜ್ಞೆಯನ್ನಿತ್ತನು. ರಾಮನು - ಇಂತು ತಂದೆಯ ಶಾಸನವನ್ನು ಶಿರದೊಳಾಂತು, ಕ್ಲುಪ್ತವಾಗಿದ್ದ ವನವಾಸಪ್ರತಿಜ್ಞೆಯನ್ನು ಈಡೇರಿಸಿ, ಪುನಃ ರಾಜ್ಯವನ್ನು ಪಡೆದು, ಧರ್ಮಾರ್ಥಕಾಮಗಳಲ್ಲಿ ಹೇಗೋ, ಹಾಗೆಯೇ ತಮ್ಮಂದಿರಲ್ಲಿಯೂ ವೈಷಮ್ಯವಿಲ್ಲದೆ ಸಮವಾದ ವೃತ್ತಿಯುಳ್ಳವನಾಗಿದ್ದನು. ಮತ್ತು- ಸ್ವಾಭಾವಿಕವಾದ ಪ್ರೀತಿಯಿಂದ ಎಲ್ಲ ತಾಯಿಯರಿಗೂ ಸಮಾನವಾದ ಸತ್ಕಾರಗಳನ್ನೊಪ್ಪಿಸುತ್ತಾ, ಷಣ್ಮುಖನು-ಆರುಮುಖಗಳಿಂದಲೂ ಸಮವಾಗಿ ಸ್ತನ್ಯ

ಪಾನವಮಾಡಿದ ಷಟ್ಕೃತ್ತಿಕೆಯಲ್ಲಿ ಹೇಗೋ ಹಾಗೆಯೇ ನಡೆದುಕೊಳ್ಳುತಲಿದ್ದನು.

ಆ ರಾಮರಾಜ್ಯದಲ್ಲಿ- ಪ್ರಜೆಗಳೆಲ್ಲ ಲೋಭವಿಲ್ಲದ ದಾತನೆನಿಸಿದ ಆ ರಾಮನಿಂದ ಧನಿಕರೆನಿಸಿದ್ದರು, ಸಕಲ ವಿಘ್ನಭಯವನ್ನು ಪರಿಹರಿಸುತಲಿದ್ದ ಆ ರಾಮನಿಂದಲೇ ಸತ್ಕರ್ಮಾನುಷ್ಠಾನಪರರಾಗಿದ್ದರು. ಧರ್ಮಶಾಸನವನ್ನು ಮಾಡಿ ನಿಯಮಿಸುತಲಿದ್ದ ಆ ರಾಮನಿಂದಲೇ ಪಿತೃವಂತರೆನಿಸಿದ್ದರು, ಶೋಕವನ್ನು ಪರಿಹರಿಸಿ ಆನಂದಗೊಳಿಸುತಲಿದ್ದ ಆತನಿಂದಲೇ ಪುತ್ರವಂತರೂ ಆಗಿದ್ದರು. ಆ ದಾಶರಥಿಯು- ಕಾಲವನ್ನತಿಕ್ರಮಿಸದೆ ಧರ್ಮಾಸನವನ್ನೇರಿ ಪ್ರಜೆಗಳ ಯೋಗಕ್ಷೇಮಗಳನ್ನು ಚೆನ್ನಾಗಿ ವಿಚಾರಿಸುತ್ತಾ, ತನ್ನೊಡನೆ ಸುಖಾನುಭವದ ಬಯಕೆಯಿಂದ ಸುಂದರವಾದ ಆಕಾರವನ್ನು ಧರಿಸಿ ಬಂದಿರುವ ಲಕ್ಷ್ಮಿಯಂತಿರುವ ವಿದೇಹ ರಾಜನಂದನೆಯಾದ ಸೀತೆಯೊಡನೆ ವಿಹರಿಸುತಲಿದ್ದನು. ರೂಪ, ರಸ, ಗಂಧ ಮೊದಲಾದ ವಿಷಯಗಳನ್ನು ಯಥೇಷ್ಟವಾಗಿ ಪಡೆದು ಹಾಯಾಗಿ ಅನುಭವಿಸುತ್ತಾ, ಶಿಲ್ಪಿಗಳಿಂದ ಅರಮನೆಯ ಗೋಡೆಗಳ ಮೇಲೆ ಚಿತ್ರಿಸಲ್ಪಟ್ಟಿರುವ ಆಲೇಖ್ಯಗಳನ್ನು ನೋಡಿ ನೆನೆವ ದಂಡಕಾರಣ್ಯದಲ್ಲಿನ ಅಗಲಿಕೆ, ಕಳವಳ ಹುಡುಕುವಿಕೆ, ಆಲಾಪ ಮೊದಲಾದ ದುಃಖಗಳೂ ಆ ಸೀತಾರಾಮರಿಗೆ ಸುಖಗಳಾಗಿ ಪರಿಣಮಿಸುತಲಿದ್ದುವು

ಹೀಗೆ ಕೆಲವು ಕಾಲ ಕಳೆದ ಬಳಿಕ-ಸೀತೆಯ ಕಣ್ಣುಗಳೊಳಗೆ ವಿಶೇಷವಾದ ಥಾಳಥಳ್ಯದ ಹೊಳವು ಕಾಣಬಂದಿತು. ಕಾಚಿಯ ಹೂವಿನಂತೆ ಮುಖವು ಬಿಳುಪೇರಿತು, ಬಾಯಿಬಿಟ್ಟು ಹೇಳದೆಯೇ ತೋರುತಲಿರುವ ಬಯಕೆಯ ಸೊಕ್ಕಿನಿಂದ ಗರ್ಭಚಿಹ್ನೆಯು ಕಾಣಬಂದಿತು, ಆಗ ಸೀತೆಯು-ಪತಿಗೆ ಪರಮಾನಂದವನ್ನುಂಟುಮಾಡತಕ್ಕವಳಾದಳು. ರಮಣನಾದ ರಾಮನು ಕುರುಹಿನಿಂದ ಪತ್ನಿಯು ಗರ್ಭಿಣಿಯೆಂಬುದನು ಅರಿತನು, ರಹಸ್ಯದಲ್ಲಿ ಲಜ್ಜಿಸುತಲಿರುವ ಆ ಕೃಶಾಂಗಿಯನ್ನು ಕುರಿತು, ಗರ್ಭವತಿಯ ಬಯಕೆಯನ್ನು ಸಲ್ಲಿಸಬೇಕೆಂಬ ಶಾಸ್ತ್ರವನ್ನನುಸರಿಸಿ ,,ಎಲೆ ರಮಣಿ ! ನಿನ್ನ ಮನದ ಅಭಿಲಾಷೆಯೇನು ? ನಾಚದೆ ಹೇಳು,, ಎಂದು ಪ್ರೇಮಭರದಿಂದ ಬೆಸಗೊಂಡನು. ಆಗಲಾ ಸೀತೆಯು-''ತೊಂಡುದನಗಳು ಮೇದು ಹೋಗುವ, ಮತ್ತು ತಿರುಕರಿಗೆ ಕೊಡತಕ್ಕುದೆನಿಸಿದ

ಧಾನ್ಯದಿಂದೊಡಗೂಡಿದುದೂ, ವೈಖಾನಸಮುನಿ ಕನ್ಯೆಯರಿಗೆ ಸ್ಥಾನ ವೆನಿಸಿದುದೂ, ಎಳೆಯ ದರ್ಭೆಯ ಹುಲ್ಲಿಗೆಡೆಯಾದುದೂ ಆಗಿರುವ ಭಾಗಿರಥೀತೀರ ತಪೋವನಗಳಲ್ಲಿ ಮರಳಿಯೊಂದುಬಾರಿ ಸಂಚರಿಸಿ ಬರ ಬೇಕೆಂದು ನನ್ನ ಮನವು ಅಭಿಲಷಿಸುತಲಿದೆ,, ಎಂದು ತನ್ನ ಮನೋರಥವನ್ನು ಪತಿಗೆ ಅರಿಕೆ ಮಾಡಿದಳು. ಪ್ರಿಯಳ ನುಡಿಯನ್ನಾಲಿಸಿ, ಮಮತೆಯಿಂದ "ವಲ್ಲಭೆಯೇ ! ನಿನ್ನ ಮನೋರಥವನ್ನು ನೆರವೇರಿಸುವೆನು." ಎಂದು ರಘುವೀರನು ಮಾತುಕೊಟ್ಟನು, ಆಹಿಂದೆ- ತಾನೊಂದುವೇಳೆ ಸಂತೋಷದಿಂದ ಉಕ್ಕುತಲಿರುವ ಅಯೋಧ್ಯೆಯ ಸೊಬಗನ್ನು ನೋಡ ಬೇಕೆಂದು ಬಗೆದು, ಮಿತಪರಿಜನರೊಡನೆ ಅರಮನೆಯ ಚಂದ್ರಶಾಲೆಯನ್ನೇರಿದನು, ಬಹುಸಮೃದ್ಧಿಯಿಂದಿರುವ ಅಂಗಡಿ ಬೀದಿಗಳನ್ನುಳ್ಳುದೂ, ವಿಚಿತ್ರವಾದ ರಾಜಮಾರ್ಗಗಳುಳ್ಳುದೂ, ತೇಲಿಹೋಗಿಬರುತಲಿರುವ ನಾವೆಗಳಿಂದ ರಮಣೀಯವೆನಿಸಿದ ಸರಯೂನದಿಯನ್ನುಳ್ಳುದೂ, ಪೌರವಿಲಾಸಿಜನಭರಿತವಾದ ಪುರೋದ್ಯಾನವುಳ್ಳುದೂ ಆಗಿರುವ ಆ ಅಯೋಧ್ಯೆಯ ಸೌಭಾಗ್ಯವನ್ನು ಕಣ್ಣಾರ ನೋಡಿ, ಆ ರಘುರಾಜೇಂದ್ರನು-ಹರ್ಷ ಪರವಶನಾದನು. ಆದರೆ-ರಾಮನು-ಮಾತನ್ನು ಬಲ್ಲವರೊಳಗೂ, ಆಡುವವರೊಳಗೂ ಬಲುಜಾಣನು, ನಗರವನ್ನವಲೋಕಿಸಿದಮಾತ್ರದಿಂದ ತೃಪ್ತನಾಗಲಿಲ್ಲ. ಬಹುಜನಸಮ್ಮತಿಯಿಂದ ತನ್ನ ನಡತೆಯ ಏರುಕೋರೆಗಳನ್ನು ತಿಳಿಯಬೇಕೆಂದು ನೆನೆದನು ಆದಿಶೇಷನಂತೆಸೆವ ಬಾಹುದಂಡವುಳ್ಳವನೂ, ಹಗೆಗಳ ಹೆಮ್ಮೆಯನ್ನಡಗಿಸಿದವನೂ ಆಗಿರುವ ಆ ರಾಮಭದ್ರನು-ತಾನು ಪಾವನಚರಿತ್ರನಾದರೂ, ಪುರಜನರಲ್ಲಿ ತನ್ನ ಚರಿತ್ರೆಯ ವಿಷಯವಾದ ಕಿಂವದಂತಿಯು ಹೇಗಿರುವುದೆಂದು ಸಮೀಪದಲ್ಲಿದ್ದ ಗೂಢ ಚಾರನಾದ ಭದ್ರನೆಂಬುವನನ್ನು ಕುರಿತು ಪ್ರಶ್ನೆ ಮಾಡಿದನು

ರಾಮನು ತನ್ನನ್ನು ಬಹಳವಾಗಿ ನಿರ್ಬಂಧಿಸಿ ಕೇಳಲು, ಭದ್ರನು- ಎಲ್ಲವನ್ನೂ ವಿವರಿಸಿ ಹೇಳತೊಡಗಿದನು:—ಎಲೈ ಮಾನವ ದೇವನೆ! ರಾಕ್ಷಸನ ಮನೆಯಲ್ಲಿ ವಾಸಮಾಡುತಲಿದ್ದ ಸೀತಾದೇವಿಯನ್ನು ಮರಳಿಕೂಡಿದ ಒಂದು ಅಂಶವನ್ನು ಬಿಟ್ಟು, ಉಳಿದ ನಿನ್ನ ಸಮಸ್ತ ಚರಿತ್ರೆಯನ್ನೂ, ಲೋಕವೆಲ್ಲ ಒಂದೇ ಮಾತಿನಿಂದ ಕೊಂಡಾಡುತಲಿದೆ ಎಂದು ಹೇಳಿಬಿಟ್ಟನು. ಅಹಹ ! ! ಅಂತಪ್ಪ ಕಳತ್ರನಿಂದೆಯಿಂದ ಗುರುತರವೆನಿಸಿ,

ಹೊರಲಸದಳವಾದ ಅಪಕೀರ್ತಿಯಿಂದಹಾಗೆ ಪೆಟ್ಟು ಬಿದ್ದ ವೈದೇಹೀವಲ್ಲಭನ ಎದೆಯು ಚಮ್ಮಟಿಕೆಯಿಂದ ಬಡಿಯಲ್ಪಟ್ಟ ಕಾಯ್ದ ಕಬ್ಬಿಣದಂತೆ ಬಡೆಯಿತು. ಆಗ-ತನ್ನ ವಿಷಯವಾಗಿ ನೆಗಳಿರುವ ಲೋಕಾಪವಾದದ ಕಥೆಯನ್ನು ಅಸಡ್ಡೆಮಾಡಿ ಬಿಟ್ಟು ಬಿಡಲೆ ? ಅಥವಾ-ದೋಷಲೇಶವಿಲ್ಲದ ಸಾಧ್ವಿಯೆನಿಸಿದ ಸೀತೆಯನ್ನು ತೊರೆದು ಬಿಡಲೆ ? ಈ ಎರಡು ಪಕ್ಷಗಳೊಳಗೆ ಯಾವುದನ್ನು ಅಂಗೀಕರಿಸಲಿ ? ಮತ್ತಾವುದನ್ನು ತ್ಯಜಿಸಲಿ ? ಎಂದು ಗೊತ್ತು ಮಾಡಲಾರದೆ ರಾಮನು- ಉಯ್ಯಾಲೆಯಂತೆ ಬಹು ಚಂಚಲವಾದ ಚಿತ್ತವೃತ್ತಿಯುಳ್ಳವನಾದನು. ರಾಮನೆಂದರೇನು ಸಾಮಾನ್ಯನೇ ? ಸರ್ವಲೋಕಮಾನ್ಯನಲ್ಲವೆ ? ಅದರಿಂದಲೇ ಅನ್ಯನಿವರ್ತ್ಯವಲ್ಲದ ಆ ಅಪವಾದವನ್ನು ಪತ್ನೀ ಪರಿತ್ಯಾಗವೆಂಬೊಂದರಿಂದಲೇ ಅಳಿಸಿ, ತೊಡೆದು ಬಿಡಬೇಕೆಂದು ನಿಶ್ಚೈಸಿದನು ಆಹಾ ! ಇದು ನ್ಯಾಯವೇಸರಿ ; ಹೇಗೆಂದರೆ - ಯಶೋಧನರಾದ ಪುರುಷರಿಗೆ ತಮ್ಮ ದೇಹಕ್ಕಿಂತಲೂ ಯಶಸ್ಸೇ ದೊಡ್ಡದೆನಿಸಿರುವುದು. ಹೀಗಿರುವಲ್ಲಿ ಸ್ರಕ್ಚಂದನ ವನಿತಾದಿಗಳೆಂಬ ಇಂದ್ರಿಯಾರ್ಥಗಳು ದೊಡ್ಡವು ಎನಿಸಬಲ್ಲುವೆ ? ಎಂದಿಗೂ ಹಾಗಾಗಲಾರವು

ರಾಮನ ಮುಖವು ಕಳೆಗುಂದಿತು, ಸಂತಸವೆಲ್ಲ ಚಿಂತೆಯರಾಶಿಯಾಯಿತು, ಮುಖವಿಕಾರವನ್ನು ಕಂಡು ಅನುಜರೆಲ್ಲ ಖಿನ್ನರಾದರು ತಮ್ಮಂದಿರನ್ನೆಲ್ಲ ಸೇರಿಸಿದನು. ತನ್ನವಿಷಯ ವಾಗಿ ಹರಡಿರುವ ಕೌಲೀನವನ್ನು ಅವರಿಗೆ ಅರುಹಿದನು, ಮರಳಿ ಅವರನ್ನು ಕುರಿತು ಇಂತೆಂದನು. ಎಲೈ ಪ್ರಿಯ ಸೋದರರುಗಳಿರಾ ! ಜಗಚ್ಚಕ್ಷುವೆನಿಸಿದ ಸೂರ್ಯನಿಂದ ನಡೆದುಬಂದ ಈ ರಾಜರ್ಷಿಗಳ ವಂಶವು ಸದಾಚಾರದಿಂದ ಪಾವನವೆನಿಸಿದುದು, ಇಂತಹ ಪರಿಶುದ್ಧಸಂತತಿಗೆ, ಹಿಮದ ಮೇಲಣ ಗಾಳಿ ಬೀಸುವುದರಿಂದ ದರ್ಪಣಕ್ಕೆ ಹೇಗೋ ಹಾಗೆ ಈ ನನ್ನಿಂದ ಎಂತಹ ಈಕಳಂಕವು ಸಂಭವಿಸಿತು ನೋಡಿರಿ. ಅದರಿಂದ ಲೋಕದಲ್ಲಿ ಬಹುಳವಾಗಿ ಪಸರಿಸುತಲಿರುವ ಈ ಅಪವಾದವು - ಜಲತರಂಗಗಳಲ್ಲಿ ಹರಡುವ ತೈಲಬಿಂದುವಿನಂತಿದೆ ಬಾಧನಸ್ತಂಭವನ್ನುಗಜೇಂದ್ರನಂತೆನಾನೀ ಪಾಪಮೂಲವಾಗಿರುವ ಈವಾಚ್ಯವನ್ನುಸಹಿಸಲು ಶಕ್ತನಲ್ಲ, ಆದಕಾರಣಪೂರ್ವದಲ್ಲಿ

ಪಿತ್ರಾಜ್ಞೆಯಿಂದಲೇ ಸಮುದ್ರಗಳಿಂದ ಬಳಸಲ್ಪಟ್ಟಿರುವ ಭೂಮಂಡಲವನ್ನು ತೊರೆದಂತೆ, ಪ್ರಸವಸಮಯವು ಸಮೀಪಿಸಿ ಇದ್ದರೂ, ವೈದೇಹಿಯನ್ನು ಈಗ ತ್ಯಜಿಸುವುದೇ ಸರಿ, ಪರಿಶುದ್ಧಳೂ ಸಾಧ್ವಿಯೂ ಆಗಿರುವ ಸೀತೆಯನ್ನು ಸರ್ವಥಾ ಪರಿತ್ಯಾಗ ಮಾಡಕೂಡದು ಎಂಬುವಿರೋ? ಅಹುದು, ಈ ಅವನಿಜೆಯು ಅಗ್ನಿಪ್ರವೇಶದಿಂದಲೂ ಪವಿತ್ರತರಳೆಂದು ನಾನು ಬಲ್ಲೆನು, ಬಹು ದೂರದ ದ್ವೀಪಾಂತರದಲ್ಲಿ ನಡೆದ ಸಂಗತಿಯು ಯಾರಿಗೆ ಗೊತ್ತಿದೆ ? ಆದರೆ ಲೋಕಾಪವಾದವೇ ದೊಡ್ಡದೆಂದು ನಾನು ಭಾವಿಸುತ್ತೇನೆ. ಸ್ವಭಾವದಿಂದಲೇ ನಿರ್ಮಲನಾಗಿರುವ ಚಂದ್ರನಲ್ಲಿ ಬಿದ್ದಿರುವ ಭೂಮಿಯ ನೆಳಲನ್ನು ಜನರು-ಕಳಂಕವನ್ನಾಗಿ ಆರೋಪಿಸುತ್ತಾರೆ. ಇದಕ್ಕೆ ಯಾರೇನು ಮಾಡತಕ್ಕದು ? ರಕ್ಕಸರನ್ನು ಕೊಲ್ಲುವ ವರೆಗೆ ನಾನು ಪಟ್ಟ ಪ್ರಯಾಸವು ವ್ಯರ್ಥವಾಗಲಿಲ್ಲ, ಏಕೆಂದರ- ಆ ಶ್ರಮವು-ವೈರಶುದ್ಧಿಗೆ ಉಪಯೋಗಿಸಿತು. ಕಾಲಿನಿಂದ ತುಳಿದರೆ, ರೋಷಗೊಂಡ ಹಾವು - ರಕ್ತವನ್ನು ಕುಡಿಯಬೇಕೆಂಬ ಆಶೆಯಿಂದ ಮೆಟ್ಟಿದವನನ್ನು ಕಚ್ಚುವುದೆ ? ಹಗೆತನವನ್ನು ತೀರಿಸಿಕೊಳ್ಳಲಿಕ್ಕೆ ಮಾತ್ರವೇ ಅಲ್ಲವೆ ? ಅದರಿಂದ - ಎದೆಯಲ್ಲಿ ನಟ್ಟಿರುವ ಈ ಲೋಕಾಪವಾದವೆಂಬ ಶಲ್ಯವನ್ನು ಕಿತ್ತೆಸೆದು, ನಾನು ಇನ್ನೂ ಕೆಲವುಕಾಲ ಜೀವಿಸಿ ಇರಬೇಕೆಂಬುದು ನಿಮಗೆ ಇಷ್ಟವಾಗಿರುವ ಪಕ್ಷದಲ್ಲಿ, ದಯಾರ್ದ್ರಹೃದಯರಾದ ನೀವು - ನನ್ನ ಈ ಮನೋನಿಶ್ಚಯವನ್ನು ಅಡ್ಡಿ ಮಾಡಬೇಡಿರಿ

ಇಂತೆಂದ ರಘುನಂದನನ ವಚನವನ್ನಾಲಿಸಿದ, ಆ ಅಣ್ಣತಮ್ಮಂದಿರೊಳಗೆ ಒಬ್ಬನಾದರೂ-ಸೀತೆಯ ವಿಷಯದಲ್ಲಿ ಮಹತ್ತರವಾಗಿ ಆಗ್ರಹಗೊಂಡಿರುವ ತಮ್ಮ ಸ್ವಾಮಿಯ ದೃಢಸಂಕಲ್ಪವನ್ನು ಒಪ್ಪಲಿಕ್ಕಾಗಲಿ, ತಿರಸ್ಕರಿಸಲಿಕ್ಕಾಗಲೀ ಸಮರ್ಥನಾಗಲಿಲ್ಲ. ಆಮೇಲೆ - ಮೂಲೋಕದ ಹೊಗಳಿಕೆಗೀಡಾದ ಹೆಸರುವಾಸಿಯನ್ನು ಪಡೆದು ,ಸತ್ಯಭಾಷಿಯಾಗಿರುವ ಲಕ್ಷ್ಮಣಾಗ್ರಜನು- ಭರತ ಶತ್ರುಘ್ನರಿಲ್ಲದ ಸಮಯದಲ್ಲಿ ತನ್ನ ಆಜ್ಞಾನುವರ್ತಿಯಾದ ಲಕ್ಷ್ಮಣನನ್ನು ಕರೆದು, ಎಲೈ ಸೌಮ್ಯನೆ! ಎಂದು ಸಂಬೋಧಿಸಿ ಇಂತು ಆಜ್ಞಾಪಿಸಿದನು:—ಗರ್ಭದಲ್ಲಿ ಪ್ರಜೆಯನ್ನುಳ್ಳವಳಾಗಿ, ನಿನಗೆ ಪ್ರಜಾವತಿಯೆನಿಸಿರುವ ಸೀತೆಯು - ಮುನಿಗಳ ತಪೋವನದಲ್ಲಿ ತಿರುಗಾಡಿ

ಬರಬೇಕೆಂಬ ತನ್ನ ಗರ್ಭದ ಬಯಕೆಯನ್ನು ನನ್ನೊಂದಿಗೆ ತಿಳಿಸಿ ಇದಾಳೆ, ಅದರಿಂದ ನೀನು ಅದನ್ನೇ ನೆಪಮಾಡಿಕೊಂಡು, ಆಕೆಯನ್ನು ರಥದಿಂದ ಕರೆದೊಯ್ದು, ವಾಲ್ಮೀಕಿ ತಪೋವನದಲ್ಲಿ ಬಿಟ್ಟುಬಿಡು ಎನಲು, ಲಕ್ಷ್ಮಣನು - ತಂದೆಯಾದ ಜಮದಗ್ನಿಯ ಶಾಸನದಿಂದ ಭಾರ್ಗವನು - ಹೆಗೆಯ ಶಿರವನ್ನಿರಿದಂತೆ ಹೆತ್ತತಾಯ ಕತ್ತನ್ನುತ್ತರಿಸಿದನು ಎಂಬುದನ್ನು ಕೇಳಿ ಇದ್ದನು, ಅದರಿಂದಲೇ ಅಣ್ಣನಪ್ಪಣೆಯನ್ನೊಪ್ಪಿಕೊಂಡನು. ಗುರ್ವಾಜ್ಞೆಯು ಅವಿಚಾರಣೀಯವಲ್ಲವೆ ? ಮತ್ತು- ಅನುಲ್ಲಂಘನೀಯವಲ್ಲವೆ ?

ತರುವಾಯ ಸೀತೆಯು - ತನ್ನ ಇಷ್ಟವನ್ನು ಪತಿಯು ನೆರವೇರಿಸುವನೆಂದು ಕೇಳಿ ಸಂತುಷ್ಟಳಾಗಿದ್ದಳು. ಸುಮಂತ್ರನು ಬೆದರದ ಕುದುರೆಗಳನ್ನು ಹೂಡಿ, ಕಡಿವಾಣಗಳನ್ನು ಹಿಡಿದು, ರಥದ ಮೂಕಿನಲ್ಲಿ ಕುಳಿತನು. ಸೌಮಿತ್ರಿಯು ಸೀತೆಯನ್ನಾರಥದಲ್ಲಿ ಕುಳ್ಳಿರಿಸಿ ಹೊರಟನು ಬಳಿಕ ವೈದೇಹಿಯು ತೆರಳುತ - ಅಲ್ಲಲ್ಲಿ ಮನೋಹರ ಪ್ರದೇಶಗಳನ್ನು ಅವಲೋಕಿಸುತ್ತಾ, ಪ್ರಿಯನು ತನಗೆ ಪ್ರಿಯಂಕರನಾಗಿರುವನೆಂದು ಆನಂದಿಸುತಲಿದ್ದಳು, ಆದರೆ - ಆ ಪ್ರಿಯನು ತನ್ನ ವಿಷಯದಲ್ಲಿ ಕಲ್ಪದ್ರುಮವಾಗದೆ, ಹತ್ತಿರಕ್ಕೆ ಬಂದವರನ್ನು ಕತ್ತರಿಸುವ ಅಸಿಪತ್ರವೃಕ್ಷವಾಗಿ ಪರಿಣಮಿಸಿರುವುದನ್ನು ಅರಿಯಲಿಲ್ಲ. ಲಕ್ಷ್ಮಣನೂ ದಾರಿಯಲ್ಲಿ ಅತ್ತಿಗೆಗೆ ಮುಂದೆ ಬದಗುವ ದುಃಖದ ಸುದ್ದಿಯನ್ನು ಮುಂದಾಗಿ ತಿಳಿಸಲಿಲ್ಲ. ಆದರೆ ಮುಂದೆ ಪ್ರಿಯನ ಸಂದರ್ಶನವು ಸಂಪೂರ್ಣವಾಗಿ ಲೋಪಿಸುವ ಗುರುತರವೆನಿಸಿದ ಭವಿಷ್ಯದ್ದುಃಖವನ್ನು, ಅದಿರುತಲಿರುವ ಎರಡಗಣ್ಣು ಹೇಳಬಿಟ್ಟಿತು. ಆ ಅಪಶಕುನದಿಂದ ಜಾನಕಿಗೆ ಬಹಳ ವಿಷಾದವುಂಟಾಯಿತು, ಕೂಡಲೆ ಮುಖಕಮಲವು ಬಾಡಿತು, ಅನುಜರಿಂದೊಡಗೂಡಿದ ರಾಮನಿಗೆ ಶುಭವಾಗಲೆಂದು ಅಂತಃಕರಣ ಧ್ಯಾನಗಳಿಂದ ಪುನಃಪುನಃಪ್ರಾರ್ಥಿಸುತ್ತಿದ್ದಳು. ಗರತಿಯೆನಿಸಿ, ಗರ್ಭಿಣಿಯೂ ಆಗಿರುವ ಅಬಲೆಯಾದ ಸೀತೆಯನ್ನು ಅಣ್ಣನಪ್ಪಣೆಯಿಂದ ಅರಣ್ಯದಲ್ಲಿ ಬಿಟ್ಟುಬಿಡಬೇಕೆಂದಿರುವ ಲಕ್ಷ್ಮಣನನ್ನು, ಇದಿರಿಗೆ ಹರಿದು ಬರುತಲಿರುವ ಜಾಹ್ನವಿಯು - ತನ್ನ

ತೆರೆಗಳೆಂಬ ಕ"ಗಳಿಂದ ಆಗಬಾರದೆಂದು ಅಡ್ಡಿ ಮಾಡುವಂತಿದ್ದಿತು. ಬ ಳಿಕ ಸತ್ಯಸಂಧನಾದ ಸೌಮಿತ್ರಿಯು - ಸುವ:ಂತ್ರನಿಂದ ರಥವನ್ನು ನಿಲ್ಲಿಸಿ, ಭ್ರಾತೃಜಾಯೆಯನ್ನು ಭಾಗೀರಥಿಯ ಮುಂಳು ನಲದಲ್ಲಿ ಇಳಿಸಿ, ಬೇಡ ರವನು ತಂದು ನಿಲ್ಲಿಸಿದ ಗಟ್ಟಿಯಾಗಿರುವ ಹರಿಗೋಲಿನ ಮೇಲೆ ಕುಳ್ಳಿ ರಿಸಿ, ಪ್ರತಿಜ್ಞೆಯನ್ನು ಹೇಗೋ ಹಾಗೆ ದೇವಗಂಗೆಯನ್ನು ದಾಟಿದನು. ಆಮೇಲೆ - ಮೃದುಹೃದಯನಾದ ಸೌಮಿತ್ರಿಯು - ಅಣ್ಣನ ಅಪ್ಪಣೆಯ ಬಿರುನುಡಿಯನ್ನು ಹೇಳಲಾರದೆ, ಉದರದಲ್ಲಿ ಬಲು, ತೊಂದರೆಗೊಂಡು ಅ ಡಗಿಸುತ ಬಂದನು, ಒಳಗಿನ ಸಂಕಟವು ಉಕ್ಕುಳಿಸುತ ಮೇಲಕ್ಕೆ ಹೊ ರಟಿತು, ಕೊಂಳು ತೋರವಾಯಿತು, ನರಗಳು ಉಬ್ಬಿದುವು, ಮುಖವು ವಿಕಾರವಾಯಿತು, ಕಣ್ಣಿನಲ್ಲಿ ನೀರು ತುಂಬಿತು, ಮೈ ಅದಿರಿತು, ತುಟಿ ಯು ನಡುಗಹತ್ತಿತು, ತಾಳಲಳವಿಲ್ಲವಾಯಿತು, ಯತ್ನವಿಲ್ಲದೆ ಹೋಯಿ ತು, ಉತ್ಪಾತ ಸಮಯದ ಮೇಘವು ಕಲ್ಲುಮಳೆಯನ್ನು ಸುರಿವಂತೆ, ರಾ ಜಶಾಸನವನ್ನು ಕಾರಿಬಿಟ್ಟನು. ಬಳಿಕ - ತಿರಸ್ಕಾರವೆಂಬ ಬಿರುಗಾಳಿ ಯ ಪೆಟ್ಟು ಬಿರುಸಾಗಿ ಬಡಿಯಿತು, ಬಡವೆಗಳೆಂಬ ಹೂಗಳು ಉದಿರಿ ದುವು, ತನಗೆ ಶರೀರವನ್ನು ಕೊಟ್ಟಿರುವ ನೆಲದಮೇಲೆ ಸೀತೆಯೆಂಬ ಲತೆ ಯು ರಪ್ಪನೆ ಬಿದ್ದಿತು. ಅಬಲೆಯರಿಗೆ ಆಪತ್ತಿನಲ್ಲಿ ಹೆತ್ತವಳೇ ದಿಕ್ಕ ಲ್ಲವೆ ? ಆದರೆ- ಇಕ್ಷ್ವಾಕು ಮಹಾರಾಜನ ವಂಶದಲ್ಲಿ ಹುಟ್ಟಿ, ಸಾಧುವೃ ತ್ತನಾಗಿ, ಕಾರಣವಿಲ್ಲದೆಯೇ ಭರ್ತನು ನಿನ್ನನ್ನು ಹೇಗೆ ತೊರೆದಾನು ; ಎಂದು ಸಂಶಯ ಪಡುತಲಿರುವಳೆಂಬಂತೆ, ಜನನಿಯಾದ ಅವನಿಯು - ಅವನಿಜೆಗ ತನ್ನೊಳಹೊಗಲು ದಾರಿಯನ್ನು ಕೊಡಲಿಲ್ಲ. ಮೂರ್ಛೆತಿಳಿ ಯುವವರೆಗ - ಸೀತೆಯು ದುಃಖವನ್ನು ತಿಳಿಯಲೇ ಇಲ್ಲ. ಎಚ್ಚರವಾ ಗಲು, ಹೊಟ್ಟೆಯೊಳಗೆ ಸಂಕಟದಿಂದ ಕುದಿದಳು. ಸೌಮಿತ್ರಿಯ ಉಪ ಚಾರದಿಂದ ಉಂಟಾದ ಎಚ್ಚರವು - ಸೀತೆಗೆ ಮೂರ್ಛೆಗಿಂತಲೂ ಹೆಚ್ಚಿದ ದುಃಖವನ್ನು ಕೊಡತಕ್ಕದಾಯಿತು. ಸಾಧ್ವಿಯಾದ ಸೀತೆಯು ದುರಿತ ವಿಲ್ಲದೆಯೇ ತನ್ನನ್ನು ತಿರಸ್ಕರಿಸಿ ಪತಿಯು ತೊರೆದರೂ, ಆತನನ್ನು ಹೀ ಯಾಳಿಸಲಿಲ್ಲ. ಮತ್ತು- ಎಂದೂ ದುಃಖವನ್ನೇ ಅನುಭವಿಸುವ ನಿರ್ಭಾ ಗ್ಯಳಾದೆನಲ್ಲಾ ಎಂದು ತನ್ನನ್ನೇ ಮರಮರಳಿ ನಿಂದಿಸಿಕೊಳ್ಳುತಲಿದ್ದಳು.

ಆ ಹಿಂದೆ ರಾಮಾನುಜನು - ಸತೀಶಿರೋಮಣಿಯಾದ ಸೀತೆಯನ್ನು ಬಹಳಹೊತ್ತಿನವರೆಗೂ ಸಮಾಧಾನಗೊಳಿಸಿ, ಎಲೌತಾಯೇ! ಇಗೋ, ಈ ದಾರಿಯನ್ನು ಹಿಡಿದು ಹೋದರೆ ವಾಲ್ಮೀಕಿ ಮಹಾಮುನಿಯ ಪುಣ್ಯಾಶ್ರಮವು ದೊರೆಯುವುದು, ನಾನಾದರೆ ಪರಾಧೀನ. ಅಣ್ಣನ ಅಪ್ಪಣೆಯಿಂದ ಕ್ರೂರಕೃತ್ಯವನ್ನು ಮಾಡಿ ಇದೇನೆ. ಎಲೌ ಮಹಾದೇವಿಯೇ ಕ್ಷಮಿಸಬೇಕು ಎಂದು ಹೇಳುತ್ತಾ ಆಕೆಯ ಅಡಿದಾವರೆಗಳನ್ನು ಹಿಡಿದನು. ಸೀತೆಯು - ಸೌಮಿತ್ರಿಯನ್ನು ಹಿಡಿದೆತ್ತಿ, ಎಲೈ ಸೌಮ್ಯನೆ! ನಾನು ನಿನ್ನ ವಿಷಯದಲ್ಲಿ ಬಹು ಪ್ರೀತಳಾಗಿದ್ದೇನೆ. ನೀನು ಚಿರಂಜೀವಿಯಾಗಿರು, ಮತ್ತು - ಇಂದ್ರನಿಂದ ಉಪೇಂದ್ರನಂತೆ ಎಂದೂ ನಿಮ್ಮಣ್ಣನಿಂದ ನೀನೂ ಪರತಂತ್ರನೇ ಆಗಿ ಇರು. ನೀನು ಇಲ್ಲಿಂದ ತೆರಳಿ, ಕೌಸಲ್ಯೆ ಮೊದಲಾದ ಅತ್ತೆಯರಿಗೆ ಕ್ರಮವಾಗಿ ನನ್ನ ವಂದನೆಯನ್ನು ಒಪ್ಪಿಸಿ, „ನನ್ನ ಉದರದೊಳಿರುವ ನಿಮ್ಮ ಮಗನ ಸಂತಾನಕ್ಕೆ ಶುಭವುಂಟಾಗುವಂತೆ ಹರಸುತಲಿರಿ" ಎಂದು ಬಿನ್ನವಿಸಿದಳೆಂಬದಾಗಿ ಅರಿಕೆಮಾಡು. ಮತ್ತು - ಎಲೈ ಸತ್ಯವಂತನಾದ ಮೈದುನನೆ! ಮಹಾರಾಜನಾದ ನಿಮ್ಮಣ್ಣನಿಗೆ ನನ್ನ ಮಾತಿನಿಂದ ಹೀಗೆ ವಿಜ್ಞಾಪಿಸು:—

"ಎಲೈ ಪ್ರಾಜ್ಞನೆ! ಕಣ್ಣೆದಿರಿಗೆ ಅಗ್ನಿಪ್ರವೇಶದಿಂದ ಪರಿಶುದ್ಧಳೆನಿಸಿದ ಈ ನನ್ನನ್ನು ಮಿಥ್ಯಾಪವಾದ ಶ್ರವಣದಿಂದ ತಿರಸ್ಕರಿಸಿದುದು ನಿನ್ನ ಶಾಸ್ತ್ರಜ್ಞಾನಕ್ಕೂ, ಪ್ರಖ್ಯಾತಿಯನ್ನು ಪಡೆದಿರುವ ನಿನ್ನ ಮನೆತನಕ್ಕೂ ತಕ್ಕುದೆ? ಅಥವಾ ಕಲ್ಯಾಣಬುದ್ಧಿಯುಳ್ಳ ನೀನು - ಮನಃಪೂರ್ವಕವಾಗಿ ನನ್ನನ್ನು ಪರಿತ್ಯಜಿಸಿದೆ ಎಂದು ನಾನು ಭಾವಿಸುವುದಿಲ್ಲ, ನಾನೇ ಜನ್ಮಾಂತರಗಳಲ್ಲಿ ಆರ್ಜಿಸಿದ ಪಾಪರಾಶಿಯ ಫಲವು ಇದೊಂದು ಬರಸಿಡಿಲಾಗಿ ನನಗೆ ಬಡಿಯಿತೆಂದೇ ಭಾವಿಸುತ್ತೇನೆ. ಹಿಂದೆ ತಾನಾಗಿ ಕರಗತಳಾಗಿದ್ದ ರಾಜ್ಯಲಕ್ಷ್ಮಿಯನ್ನು ತೊರೆದು, ನ್ನನನೊಡಗೊಂಡು ಕಾಡಿಗೆ ತೆರಳಿದೆ. ಈಗ ಆಕೆಗೆ ನಿನ್ನೊಡನೆ ಕಲೆತು ಪ್ರತಿಷ್ಠೆಯುಂಟಾಯಿತು. ನನ್ನ ವಿಷಯದಲ್ಲಿ ರೋಷವೂ ಇದ್ದಿತು. ಅದರಿಂದಲೇ ತನ್ನ ಮನೆಯಲ್ಲಿ ನಾನಿರುವುದನ್ನು ಸಹಿಸದೆ ಹೋದಳು. ನಿಶಾಚರರಿಂದ ತಂತಮ್ಮ

ಪತಿಯರಿಗೆ ತೊಂದರೆಯುಂಟಾದಾಗ, ತಪಸ್ವಿನಿಯರು ಬಂದು, "ಅಮ್ಮಾ ವೈದೇಹೀ ! ನಿನ್ನ ಪತಿಗೆ ಅರಿಕೆ ಮಾಡಿ ನಮ್ಮ ಸಂಕಟವನ್ನು ಪರಿಹರಿಸು,, ಎಂದು ನನ್ನನ್ನು ಮರೆಹೊಗುತಲಿದ್ದರು, ನಿನ್ನ ಅನುಗ್ರಹದಿಂದ ಹಾಗೆ ಇದ್ದ ಈ ನಾನು-ನೀನು ಮಹೋನ್ನತನಾಗಿರುವಲ್ಲಿ, ಈಗ ಬೇರೊಬ್ಬ ತಪಸ್ವಿಯಬಳಿಗೆ ಹೋಗಿ ಹೇಗೆ ಮರೆಹೊಗುವೆನು ? ಅಥವಾ-ನಿನ್ನ ಸಂದರ್ಶನವು ನನಗೆ ದೊರೆಯುವುದಿಲ್ಲವೆಂಬುದು ಸಿದ್ಧವಾಗಿರುವಲ್ಲಿ ಈನನ್ನ ಹಾಳು ಜೀವಿತದಲ್ಲಿ ಆಶೆಯನ್ನು ತೊರೆಯ ಬಲ್ಲೆನು ಆದರೆ-ನನ್ನ ಉದರದಲ್ಲಿ ಅವಶ್ಯಕವಾಗಿ ರಕ್ಷಿಸಬೇಕಾಗಿರುವ ನಿನ್ನ ಸಂತಾನವು ಬಲವಾದ ಅಡ್ಡಿಯಾಗಿದೆ. ಅದರಿಂದ ಯತ್ನವಿಲ್ಲದಿರುವುದು. ಆದಕಾರಣ-ಪ್ರಸವಾನಂತರದಲ್ಲಿ-ಮುಂದಿನ ಜನ್ಮದೊಳಗೆ ನೀನೇ ನನಗೆ ಪ್ರಾಣಪ್ರಿಯನಾಗಬೇಕು, ಮತ್ತು ಅಗಲಿಕೆಯುಂಟಾಗಬಾರದು. ಅಂತಹ ಫಲವನ್ನು ಕೊಡುವ ಹಾಗೆ, ಸೂರ್ಯನಲ್ಲಿ ದೃಷ್ಟಿಯನ್ನಿಟ್ಟು, ಈ ನಾನು ತೀವ್ರವಾದ ಪಂಚಾಗ್ನಿಮಧ್ಯದ ತಪಸ್ಸನ್ನು ಆಚರಿಸಲುಯತ್ನಿಸುವೆನು. ವರ್ಣಾಶ್ರಮಗಳಿಗೆ ಸಾಂಕರ್ಯವಿಲ್ಲದಂತೆ ಪಾಲಿಸೋಣವೇ ರಾಜಧರ್ಮವೆಂದು ಮಹಾನುಭಾವನಾದ ಮನುವು ಉದಹರಿಸಿರುವನು. ಆದಕಾರಣದಿಂದಲೇ ನೀನು ನನ್ನನ್ನು ತಿರಸ್ಕರಿಸಿ ಹೊರಡಿಸಿದೆಯಲ್ಲವೆ ? ಹಾಗಾದರೂ ನನ್ನಲ್ಲಿ ಕಳತ್ರ ದೃಷ್ಟಿಯನ್ನಿಡದೆ, ನಿನ್ನ ಆಳ್ವಿಕೆಗೆ ಒಳಪಟ್ಟ ಅರಣ್ಯದಲ್ಲಿ ವಾಸಮಾಡುತಲಿರುವ ತಪಸ್ವಿಗಳಲ್ಲಿ ಹೇಗೋಹಾಗೆಯೇ ನನ್ನಲ್ಲಿಯೂ ಪಾಲ್ಯದೃಷ್ಟಿಯನ್ನಿಟ್ಟಿರಬೇಕು,, ಎಂಬದಾಗಿ ಬಿನ್ನವಿಸಿದಳೆಂದು ಅರಿಕೆ ಮಾಡು" ಎಂದಳು.

ಬಳಿಕ ಲಕ್ಷ್ಮಣನು-ಹಾಗೆಯೇ ಆಗಲೆಂದು ಹೇಳಿ, ಸೀತೆಗೆ ಅಭಿವಂದಿಸಿ ಹೊರಟನು, ದೃಷ್ಟಿಮಾರ್ಗವನ್ನು ಅತಿಕ್ರಮಿಸಿದನು. ವೈದೇಹಿಯು ವ್ಯಸನವನ್ನು ಸಹಿಸಲಾರದೆ ಹೋದಳು, ಸಿಂಹವ್ಯಾಘ್ರಾದಿ ಕ್ರೂರ ಮೃಗಗಳಿಂದೊಡಗೂಡಿದ ಘೋರವಾದ ಮಹಾರಣ್ಯ ನೀನೇ ಎಂಬ ಬೇರೆದಿಕ್ಕಿಲ್ಲ. ಅಬಲೆ, ಗರ್ಭಿಣಿ, ಬಹಳವಾಗಿ ಹೆದರಿದಳು, ದುಗುಡವು ಮಿತಿಮೀರಿತು, ಲಜ್ಜೆಯನ್ನು ತೊರೆದು, ಉಚ್ಚಸ್ವರದಿಂದ ಹೆಣ್ಣೊರಳೆಯಂತೆ ಗೊಳೋ ಎಂದು ಅಳತೊಡಗಿದಳು. ಆಗ-ಕುಣಿಯುತಿದ್ದ

ನವಿಲುಗಳು ಸುಮ್ಮನಾದುವು, ತರುಗಳು ಕುಸುಮಗಳನ್ನುದಿರಿಸಿದುವು, ಹುಲ್ಲೆಗಳು-ಮೇಯುವಾಗ ಬಾಯಿಂದ ಹಿಡಿದಿದ್ದ ಹುಲ್ಲಕಡ್ಡಿಯನ್ನು ಹಾಗೆಯೇ ಬಿಟ್ಟು, ಅಲುಗದೆ ನಿಂತುವು. ಹೀಗೆ ಆ ವನವೆಲ್ಲವೂ ಆಕೆಯೊಡನೆ ಸಮಾನವಾದ ದುಃಖವನ್ನುಳ್ಳುದಾಗಿದ್ದಿತು.

ಹಿಂದೆ ತಮಸಾನದಿಯ ತೀರದಲ್ಲಿ ಒಬ್ಬ ಬೇಡನು-ಒಡನಾಡಿಗಳಾಗಿದ್ದ ಬಕಪಕ್ಷಿಗಳೊಳಗೆ ಪುರುಷಪಕ್ಷಿಯೊಂದನ್ನು ಕೊಂದನು. ಅದನ್ನು ನೋಡಿ ತಾಳಲಾರದೆ ಹೋದ ಯಾವ ಕರುಣಾಳುವಿನ * ಶೋಕವೂ ಶ್ಲೋಕರೂಪವನ್ನು ಪಡೆಯಿತೋ ಆ ಮಹಾನುಭಾವನೇ ವಾಲ್ಮೀಕಿ ಮುನಿ, ಆತನೀಗ-ದರ್ಭೆ, ಸಮಿತ್ತು ಮೊದಲಾದವುಗಳನ್ನು ತರಲಿಕ್ಕೆಂದು ಅರಣ್ಯಕ್ಕೆ ತೆರಳಿದ್ದನು, ದೂರದಲ್ಲಿ ರೋದನ ಧ್ವನಿಯು ಕೇಳಬಂದಿತು. ಆಸದ್ದನ್ನೇ ಅನುಸರಿಸಿ ಬಂದು ಆಕೆಯನ್ನು ಇದಿರ್ಗೊಂಡನು. ಜಾನಕಿಯು-ಆ ಮುನಿವರನನ್ನು ಕಂಡಳು, ಗೋಳನ್ನು ನಿಲ್ಲಿಸಿದಳು, ಕಣ್ಣುಗಳಲ್ಲಿ ತುಂಬಿದ್ದ ನೀರನ್ನು ಸೀತೆಯು ಸೆರಗಿನಿಂದ ಒತ್ತಿದಳು, ತಪೋನಿಧಿಗೆ ವಂದಿಸಿದಳು. ಮಹರ್ಷಿಯು-ಮಹೀಸುತೆಯ ಗರ್ಭಚಿಹ್ನೆಯನ್ನು ಕಂಡನು, "ಮಗಳೇ ! ಸುಪುತ್ರವತಿಯಾಗು" ಎಂಬ ಮಂಗಳಾಶಾಸನವನ್ನು ಹೀಗೆ ಹೇಳತೊಡಗಿದನು, ಎಲೌ ವತ್ಸೆ ! ಮಿಥ್ಯಾಪವಾದದಿಂದ ಕಳವಳಗೊಂಡ ಪತಿಯು ನಿನ್ನನ್ನು ತಿರಸ್ಕರಿಸಿರುವನೆಂಬುದನ್ನು ಧ್ಯಾನ ದೃಷ್ಟಿಯಿಂದ ತಿಳಿದು ಇದೇನೆ, ನಾಗು ವೈದೇಹಿ ! ಬೇರೆಸ್ಥಳದಲ್ಲಿರುವ ನಿಮ್ಮ ತಂದೆಯ ಮನೆಗೇ ನೀನೀಗ ಬಂದು ಇದ್ದೀಯೆ, ಆದಕಾರಣ ವ್ಯಥೆಪಡಬೇಡ ಎಂದನು. ಪತಿಯು ತೊರೆದ ಸತಿಯರಿಗೆ ಪಿತೃಗೃಹವೇ ಶರಣಲ್ಲವೆ ? ಮೂಲೋಕದ ಮುಳ್ಳನ್ನು ಕಿತ್ತೆಸೆದವನೂ, ಸತ್ಯಪ್ರತಿಜ್ಞನೂ, ತನ್ನನ್ನು ತಾನು ಹೊಗಳಿ ಕೊಳ್ಳದವನೂ ಆಗಿ, ನನಗೆ ಪ್ರೀತಿಪಾತ್ರನೆನಿಸಿದ್ದರೂ, ನಿನ್ನ ವಿಷಯದಲ್ಲಿ ಅನೃತಲೋಕವಾದದಿಂದ ಮಲಿನ ಮನಸ್ಸಿನವನಾಗಿ ನಿಂದಿತವಾದ ಕೆಲಸವನ್ನು ಮಾಡಿದುದರಿಂದ

*"ಮಾನಿಷಾದ ಪ್ರತಿಷ್ಠಾಂ ತ್ವ ಮಗಮಃ ಶಾಶ್ವತೀಃ ಸ್ಸಮಾಃ ।
ಯತ್ಕ್ರೌಂಚ ಮಿಥುನಾ ದೇಕ ಮವಧೀಃ ಕಾಮ ಮೋಹಿತಂ ॥"
(ಇದೇ ಮುನಿಮುಖದಿಂದ ಹೊರಟ ಶೋಕವು ಶ್ಲೋಕವಾದುದು)

ಭರತಾಗ್ರಜನಲ್ಲಿ ನನಗೆ ಖಂಡಿತವಾಗಿ ಆಗ್ರಹವುಂಟು. ಅಮ್ಮಾ! ಸೀತೆ! ಉದಾರ ಕೀರ್ತಿಸಂಪನ್ನನಾದ ನಿಮ್ಮ ಮಾವನು ನನ್ನ ಸಖನು. ನಿಮ್ಮ ತಂದೆಯಾದ ಜನಕನಾದರೆ ವಿದ್ಯಾವಂತರಿಗೂ ಜ್ಞಾನೋಪದೇಶವನ್ನು ಮಾಡಿ, ಸಂಸಾರ ದುಃಖವನ್ನು ಪರಿಹರಿಸತಕ್ಕವನು. ನೀನೋ ಪತಿವ್ರತೆಯರೊಳಗೆ ಅಗ್ರಗಣ್ಯಳು ಆದಕಾರಣ ಸರ್ವಪ್ರಕಾರದಿಂದಲೂ ನೀನು ನನ್ನ ದಯೆಗೆ ಪಾತ್ರಳೆನಿಸಿ ಇದ್ದೀಯೆ. ತಪಸ್ವಿಗಳ ಸಹವಾಸದಿಂದ ಸಹಜವಾದ ವೈರವನ್ನು ತೊರೆದಿರುವ ಶಾಂತಮೃಗಗಳಿಂದೊಡಗೂಡಿದ ಈ ತಪೋವನದಲ್ಲಿ ಯಾವುದೊಂದು ಭಯ ವೂ ಇಲ್ಲದೆ ಸುಖವಾಗಿ ವಾಸಮಾಡುತಲಿರು, ಇಲ್ಲಿಯೇ ನಿನ್ನ ಸುಖಪ್ರಸವವು ಬೆಳೆಯಲಿ, ನಿನ್ನ ಮಂಗಳಸಂತಾನಕ್ಕೆ ಜಾತಕರ್ಮವೇ ಮೊದಲಾದ ಸಂಸ್ಕಾರವು ವಿಧಿಪ್ರಕಾರ ನಡೆಯುವುದು. ನೀನು ಯೋಚಿಸಬೇಕಾದುದಿಲ್ಲ. ಮುನಿಗಳ ಎಲೆಮನೆಗಳೆಲ್ಲ ಈ ತಮಸಾನದಿಯ ತೀರದಲ್ಲಿಯೇ ಸಾಲಾಗಿ ನೆಲೆಗೊಂಡಿವೆ. ಈ ಪರ್ಣಶಾಲೆಯಲ್ಲಿರುತ್ತಾ, ಪಾಪಪರಿಹಾರಕವಾದ ತಮಸಾನದಿಯಲ್ಲಿ ಮಿಂದು, ಹತ್ತಿರದಲ್ಲಿರುವ ರಮ್ಯವಾದ ಮರಳು ನೆಲದಲ್ಲಿ ಕುಳಿತು, ನಿನ್ನ ಇಷ್ಟದೇವತೆಯನ್ನು ಭಕ್ತಿಯಿಂದ ಪೂಜಿಸುತಲಿದ್ದರೆ ನಿನ್ನ ಮನಸ್ಸಿಗೆ ವಿಶೇಷವಾದ ಪ್ರಸನ್ನತೆಯುಂಟಾಗುವುದು. ನಿನ್ನ ಪೂಜೆಪುರಸ್ಕಾರಗಳಿಗೆ ಬೇಕಾಗುವ ಕಾಲದಲ್ಲಿ ಸಿದ್ಧವಾದ ಹೂವು ಹಣ್ಣುಗಳನ್ನೂ, ಉತ್ತು ಬಿತ್ತದೆಯೇ ಬೆಳೆದ ಕಾಳುಕಡ್ಡಿಗಳನ್ನೂ ಒದಗಿಸಿಕೊಡುತ್ತಾ, ಮುನಿಕುಮಾರಿಯರು-ನಿನ್ನೊಡನೆ ಮೃದುಮಧುರವಾದ ಮಾತುಗಳನ್ನಾಡಿಕೊಂಡು, ನಿನಗೆ ನೂತನವಾಗಿ ಉಂಟಾಗಿರುವ ಮನೋವ್ಯಥೆಯನ್ನು ಪರಿಹರಿಸುತ್ತಿರುವರು. ನಿನ್ನ ಕೈಯಿಂದ ಎತ್ತಲಿಕ್ಕೆ ಆಗುವಂತಹ ಪಾತ್ರೆಗಳಿಂದ ನೀರು ತಂದು, ಆಶ್ರಮದಲ್ಲಿನ ಹೂವಿನ ಗಿಡಗಳಿಗೆರೆದು, ಬೆಳೆಯಿಸುತ್ತಾ, ಅವುಗಳಲ್ಲಿ ಎಳೆಯ ಹಸುಳೆಗಳೊಳಗೆ ಹೇಗೋ ಹಾಗೆ ಮಮತೆಯನ್ನಿಟ್ಟುಕೊಂಡು, ಸುಖ ಪ್ರಸವದವರೆಗೆ ವಿನೋದದಿಂದ ಕಾಲವನ್ನು ಕಳೆಯುತಲಿರು, ತರುವಾಯ ನಿನ್ನ ಮನೋವಿನೋದವು ಸುಲಭವಾಗಿರುವುದು. ಎಂದು ಹೇಳಿ, ದಯಾಳುವಾದ ವಾಲ್ಮೀಕಿಮುನಿಯು-ತನ್ನ ಅನುಗ್ರಹದಿಂದ ಸಂತುಷ್ಟಳಾದ ಸೀತೆಯನ್ನು ಕರೆದು,

ಕೊಂಡು ಸಂಜೆಯ ಹೊತ್ತಿನಲ್ಲಿ ತನ್ನ ಆಶ್ರಮಕ್ಕೆ ಬಂದನು. ಸಹಜ ವೈರವನ್ನು ತೊರೆದಿರುವ ಮೃಗಗಳೆಲ್ಲ ಅಲ್ಲಲ್ಲಿ ಅಡಗಿದ್ದುವು. ಅಗ್ನಿಶಾಲೆಯ ವೇದಿಯ ಸುತ್ತಲೂ ಹುಲ್ಲೆಗಳು ಮಲಗಿ ಮೆಲುಕು ಹಾಕುತಲಿದ್ದುವು.

ಪಾಡ್ಯ ಮೊದಲ್ಗೊಂಡು ಅಗ್ನಿಯೇ ಮೊದಲಾದ ದೇವತೆಗಳಿಂದ ಪಾನಮಾಡಲ್ಪಟ್ಟು ಉಳಿಯುವ ಕಡೆಯದಾದ ಚಂದ್ರನ ಅಮೃತಮಯವಾಗಿರುವ ಕಳೆಯನ್ನು, ಅಮಾವಾಸ್ಯಾ ರೂಪವಾದಶಾಖವು - ಓಷಧಿಗಳಲ್ಲಿಡುವ ಹಾಗೆ, ಮುನಿಯು - ಜಾನಕಿಯನ್ನು ತಪಸ್ವಿನಿಯರಿಗೊಪ್ಪಿಸಿದನು. ತಾಪಸಿಯರು - ಶೋಕದೀನಳಾಗಿರುವ ಆ ವೈದೇಹಿಯನ್ನು ಆಗಮನದಿಂದ ಆನಂದಿಸುತ್ತಾ, ಆಕೆಯನ್ನು ಬಹಳವಾಗಿ ಆದರಿಸಿದರು. ಉಚಿತ ಸತ್ಕಾರಾನಂತರದಲ್ಲಿ ರಾತ್ರಿಯಾಗಲು, ಪರ್ಣಶಾಲೆಯೊಳಗೆ ಇಂಗುಳದ ಎಣ್ಣೆಯಿಂದ ದೀಪವನ್ನು ಅಣಿಮಾಡಿದರು, ಮೃದುವಾದ ಕೃಷ್ಣಾಜಿನವನ್ನು ಮಲಗಲಿಕ್ಕೆ ಹಾಸಿಕೊಟ್ಟರು. ಅಂದಿನ ಇರುಳನ್ನು ಸೀತೆಯು ಚಿಂತೆಯಿಂದಲೇ ಕಳೆದಳು.

ಮಾರನೆಯ ದಿವಸದಿಂದ ನಾರು ಸೀರೆಯನ್ನುಟ್ಟು, ತಮಸೆಯಲ್ಲಿ ಮಿಂದು ಪರಿಶುದ್ಧಳಾಗಿ, ವಿಧಿ ಪ್ರಕಾರ ಅರ್ಘ್ಯಗಳನ್ನು ಸತ್ಕರಿಸುತ್ತಾ, ವನದಲ್ಲಿನ ಕಂದಮೂಲಾದಿಗಳಿಂದ ಆಹಾರವನ್ನು ತೀರಿಸಿಕೊಂಡು, ಪತಿ ಸಂತತಿಯ ಸುಖವಾದ ಬೆಳವಣಿಗೆಗಾಗಿ ಶರೀರವನ್ನು ಪೋಷಿಸಿ ಕೊಳ್ಳುತಲಿದ್ದಳು.

ಇತ್ತ ಇಂದ್ರಜಿದ್ವೈರಿಯು ಪ್ರತಸ್ಥನಾದನಂತರದಲ್ಲಿ “ ಈಗಲಾದರೂ ಪ್ರಭುವಾದ ರಾಮಚಂದ್ರನು ಪಶ್ಚಾತ್ತಾಪದಿಂದೊಡಗೂಡಿದವನೋ ಹೇಗೋ ನೋಡೋಣ,, ಎಂದು ನೆನೆದು, ಅಯೋಧ್ಯೆಯನ್ನು ಬಿಟ್ಟಂದು ಮೊದಲ್ಗೊಂಡು ಗಮನವನ್ನು ಹೊಕ್ಕು, ಸೀತೆಯ ಘೋರ ಪ್ರಲಾಪದವರೆಗೂ ತಾನು ನಡೆಯಿಸಿದ ಸಮಾಚಾರವನ್ನೆಲ್ಲ ವಿವರವಾಗಿ ಅಣ್ಣನಿಗೆ ಬಿನ್ನವಿಸಿದನು. ಕೋಮಲ ಹೃದಯನಾದ ರಾಮನು - ಲಕ್ಷ್ಮಣನ ನುಡಿಗಳನ್ನು ಕೇಳುತಲಿರುವಕ್ಷಣದಲ್ಲಿಯೇ ಕಣ್ಣುಗಳಿಂದ ಜಲಧಾರೆಗಳನ್ನು ಸುರಿಸುತ್ತಾ, ಮಂಜಿನಮಳೆಯನ್ನು ಕರೆವ ಪುಷ್ಯಮಾಸದ ಚಂದ್ರನಂತಾದನು. ಕೌಲೀನದಿಂದ ಅಂಜಿದರಾಮನಿಂದ ಜಾನಕಿಯು ಪ್ರತ

ದಿಂದ ಹೊರಡಿಸಲ್ಪಟ್ಟಿದ್ದಳಲ್ಲದೆ ಮನಸ್ಸಿನಿಂದ ಹೊರಡಿಸಲ್ಪಟ್ಟಿರಲಿಲ್ಲ.

ರಾಮನು ಮಹಾಧೀಮಂತನೇ ಅಲ್ಲವೇ ? ತನ್ನ ವಿವೇಕ ಶಕ್ತಿಯಿಂ ದಲೇ ಶೋಕವನ್ನು ಅಡಗಿಸಿಕೊಂಡು, ಎಚ್ಚರದಪ್ಪದೆ, ಪ್ರಜೆಗಳ ಯೋಗಕ್ಷೇಮವನ್ನೇ ಚೆನ್ನಾಗಿ ವಿಚಾರಿಸುತ್ತಾ, ಸೋದರರೊಡನೆ ಶರೀರ ಸ್ಥಿತಿಗೆ ತಕ್ಕಷ್ಟು ಸುಖವನ್ನು ಅನುಭವಿಸಿಕೊಂಡು, ಮತ್ತೆ ನಾಗದೆ ಸಮೃದ್ಧವಾದ ರಾಜ್ಯವನ್ನಾಳುತಲಿದ್ದನು. ರಾಮನು - ಒಬ್ಬಳೇ ಹೆಂಡತಿಯಾಗಿದ್ದರೂ, ಸತೀ ಶಿರೋಮಣಿಯೆನಿಸಿದ್ದರೂ ಲೋಕವಾರ್ತೆ ಯಿಂದ ಹೆದರಿ, ಆಕೆಯನ್ನು ಕಾಡಿಗಟ್ಟಿದನಷ್ಟೆ ? ಆತನ ವಕ್ಷಸ್ಥಲ ವಾಸಿನಿಯಾದ ರಾಜ್ಯ ಲಕ್ಷ್ಮಿಯು - ಸವತಿಯ ಕಾಟವನ್ನು ತಪ್ಪಿಸಿ ಕೊಂಡವಳಂತೆ ವಿರಾಜಿಸುತಲಿದ್ದಳು.

ರಾವಣಾರಿಯು - ಇಂತು ಸೀತೆಯನ್ನು ತೊರೆದರೂ, ಬೇರೊಂದು ಹೆಣ್ಣನ್ನು ಮದುವೆ ಮಾಡಿ ಕೊಳ್ಳಲೇ ಇಲ್ಲ. ಸುವರ್ಣಮಯವಾಗಿರುವ ಸೀತೆಯ ಪ್ರತಿಮೆಯನ್ನು ಮಾಡಿಟ್ಟುಕೊಂಡೇ ಯಾಗಗಳನ್ನೂ ಆಚರಿ ಸುತ್ತಿದ್ದನು. ವಾಲ್ಮೀಕಿಮುನಿವನವಾಸಿನಿಯಾದ ಸೀತೆಯು - ಆ ವಿಧ ವಾದ ರಾಮನ ವೃತ್ತಾಂತವನ್ನು ಕರ್ಣಾಕರ್ಣಿಕೆಯಿಂದ ಕೇಳುತ್ತಾ, ತಾಳಲಾರದಿದ್ದ ತನ್ನ ಪರಿತ್ಯಾಗದಿಂದುಂಟಾದ ಶೋಕವನ್ನು ಬಹು ಕಷ್ಟದಿಂದ ಸಹಿಸುತ್ತಿದ್ದಳು.

— ಇಂತು ಸೀತಾಪರಿತ್ಯಾಗವೆಂಬ ಹದಿನಾಲ್ಕನೆಯ ಅಧ್ಯಾಯಂ —

ಶ್ರೀ ರಾಮಚಂದ್ರಾಯನಮಃ.

## ಹದಿನೈದನೆಯ ಅಧ್ಯಾಯ.

ಸೂಚನೆ ॥ ಲವಣನ ಮಾಳ್ಕೆಂಬೂಕನ ।
ಮವರಜನಿಂ ರಾಮ ನಿರಿದುಬಳಿಕಂ ಸವದೊಳ್॥
ಅವನಿಜೆಯುಡಗಲ್ ಭೂಮಿಯೊ ।
ಳವರಜರಿಂ ಪ್ರಜೆಗಳೀಂದೆ ಸೇರ್ದಂ ದಿವಮಂ ॥

ರಘುಕುಲಲಲಾಮನಾದ ರಾಮನು - ಸತಿಯಾದ ಸೀತೆಯನ್ನು ಕಾಡಿಗೆ ಕಳುಹಿದನಷ್ಟೆ ? ಆಮೇಲೆ-ಮಹಿಜೆಯಿಲ್ಲದೆ ರತ್ನಾಕರ ಮೇಖಲೆ

ಯಾದ ಮಹಿಯನ್ನು ಮಾತ್ರವೆ ಅನುಭವಿಸುತಲಿದ್ದನು. ದಿಕ್ಕಿಲ್ಲದವರಿಗೆ ಯಾರುದಿಕ್ಕು ? ರಾಮನೇ ಅಲ್ಲವೇ ? ಅದರಿಂದಲೇ ಯಮುನಾತೀರ ವಾಸಿಗಳಾದ ಮುನಿಗಳು - ಯಾಗಗಳನ್ನು ಮಾಡತೊಡಗಿ, ತಾಮಸ ನಾಗಿದ್ದ ಲವಣನೆಂಬ ಅಸುರನು ತೊಂದರೆಗೊಳಿಸಲು, ಬೇರೆ ರಕ್ಷಕರ ನ್ನರಿಯದೆ, ರಾಮನನ್ನೇ ಬಂದು ಮರೆ ಹೊಕ್ಕರು. ಆದರೆ ಆ ತಪಸ್ವಿ ಗಳು - ತಮಗೆ ರಾಮನು ರಕ್ಷಕನಾಗಿರುವನೆಂದು ತಿಳಿದೇ ತಮ್ಮ ತೇಜ ಸ್ಸಿನಿಂದ ಆ ನಿಶಾಚರರನ್ನು ಸುಡಲಿಲ್ಲ. ತಾಪಸರು - ತಮಗೆ ಅಭಯ ದಾನವನ್ನು ಮಾಡತಕ್ಕವರಾರೂ ಇಲ್ಲದಿದ್ದಾಗ ಮಾತ್ರವೇ ಅಪರಾಧಿಗ ಳಲ್ಲಿ ಶಾಪಾಸ್ತ್ರವನ್ನು ಪ್ರಯೋಗಿಸಿ ತಮ್ಮ ತಪೋಧನವನ್ನು ವೆಚ್ಚ ಮಾಡಿಕೊಂಬರು. ರಾಮನು - ಆ ಮುನಿಗಳಿಗೆ ಲವಣಾಸುರನನ್ನು ವಧಿಸುವೆನೆಂದು ಮಾತು ಕೊಟ್ಟನು. ಅವನು ಹಾಗೆ ಪ್ರತಿಜ್ಞೆ ಮಾಡಿ ದುದು ನ್ಯಾಯವಾಗಿದೆ. ಏಕೆಂದರೆ - ಚಕ್ರಪಾಣಿಯು - ಭೂಮಿ ಯಲ್ಲಿ ರಾಮರೂಪದಿಂದವತರಿಸಿದುದು - ಧರ್ಮ ಸಂರಕ್ಷಣೆಗೋಸ್ಕರವೇ ಅಲ್ಲವೇ ? ಆಗ ಲಾವಣಾಕಸರು - ರಾಮನನ್ನು ಕುರಿತು ಎಲೈ ದಾಶರ ಥಿಯೇ ! ಲವಣನು ಹರನವರದಿಂದ ಒಂದು ಶೂಲಾಯುಧವನ್ನು ಪಡೆದಿ ರುವನು. ಆದಕಾರಣ - ಅದು ಅವನ ಕಯ್ಯಲ್ಲಿಲ್ಲದ ವೇಳೆಯಲ್ಲಿಯೇ ಇದಿರಿಸಿ ಇರಿಯ ಬೇಕು ಎಂದರು.

ಬಳಿಕ ರಾಘವನು - ಅರಿಘ್ನನ್ನಿರುವುದರಿಂದ ಅನುಜನ ಹೆಸರನ್ನು ಸಾರ್ಥಕಗೊಳಿಸಬೇಕೆಂದುನೆನೆದನೊಎಂಬಂತೆ "ಮುನಿಗಳಿಗೆಕ್ಷೇಮವನ್ನು ಕಲ್ಪಿಸು,, ಎಂದು ಶತ್ರುಘ್ನನಿಗೆ ಆಜ್ಞಾಪಿಸಿದನು. ಲೋಕದಲ್ಲಿ ವಿಶೇಷ ವಿಧಿಯು ಸಾಮಾನ್ಯ ವಿಧಿಯನ್ನು ಬಾಧಿಸುವ ಹಾಗೆ, ರಘುಕುಲದ ರಸ ರಲ್ಲಿ ಯಾವನಾದರೊಬ್ಬನು ಹಗೆಯನ್ನಡಗಿಸಿದರೆ ಸರಿ, ಅದರಿಂದಲೇ ಸಪತ್ನ ಸಂಹಾರಕ್ಕೆ ರಾಮನೇ ಹೋಗಬೇಕೆಂಬ ನಿಯಮವೇನೂ ಇಲ್ಲ ಆದಕಾರಣ ಶತ್ರುಘ್ನನನ್ನು ಕಳುಹಿಸಲೆಳಸಿದನು. ಅನುಜನಾಗಲೆ ಅಗ್ರಜನ ಆಶೀರ್ವಾದವನ್ನಾಂತು, ನಿರ್ಭಯನಾಗಿ ರಥವನ್ನೇರಿ, ಪುಷ್ಪಿಸಿ ಗಮ ಗಮಿಸುತಲಿರುವ ವನಸ್ಥಲಿಗಳನ್ನು ನೋಡಿ ಸಂತೋಷಿಸುತ್ತಾ ಹೊ ರಟು ಬಂದನು.

ಬಳಿಕ - ಅಧ್ಯಯನಾರ್ಥಕ ಇ ಎಂಬ ಧಾತುವನ್ನು ಅರ್ಥ ಸಿದ್ಧಿಗೋಸ್ಕರ ಅಧಿ ಎಂಬ ಪೂರ್ವಪ್ರತ್ಯಯವು (ಉಪಸರ್ಗ) ಎಡೆಬಿಡದೆ ಹಿಂಬಾಲಿಸುವಹಾಗೆ, ರಾಮಾದೇಶದಿಂದ ಸೇನೆಯೂ - ಭರತನನ್ನು ಅನುಸರಿಸಿ ಹೊರಟಿತು ! ರಥದ ಮುಂದೆ ಮುನಿಗಳು ಪರಂತಪನಾದ ಶತ್ರುಘ್ನನಿಗೆ ದಾರಿತೋರುತ ತೆರಳಿದರು, ಆಗ ಶತ್ರುಘ್ನನು - ಮುಂದುವರಿದ ವಾಲಖಿಲ್ಯಾದಿ ಮುನಿಗಳಿಂದೊಡಗೂಡಿದ ಅಂಶುಮಂತನಂತೆ ವಿರಾಜಿಸುತಲಿದ್ದನು. ಹಾಗೆಯೇ ಪಯಣವನ್ನು ಬೆಳೆಸುತ ಬಂದನು. ತೇರಿನ ಗಾಲಿಯ ಸದ್ದನ್ನು ಕೇಳಿ ಕುತೂಹಲದಿಂದ ತಲೆಯನ್ನೆತ್ತಿ ನೋಡುತ ಅಲುಗದೆ ನಿಂತಿರುವ ಹುಲ್ಲೆಗಳಿಂದ ಅಂದವಾದ ವಾಲ್ಮೀಕಿ ಮುನಿಯ ತಪೋವನದಲ್ಲಿ ಮಾರ್ಗವಶದಿಂದ ಬಂದಿರುಳು ತಂಗಿ ಇರಬೇಕಾಯಿತು. ಬಳಲಿದ ಕುದುರೆಗಳನ್ನೊಳಗೊಂಡಿದ್ದ ತೇರಿನಿಂದಿಳಿದ ಕುವರನ ಶತ್ರುಘ್ನನನ್ನು, ವಾಲ್ಮೀಕಿಮುನಿಯು - ತನ್ನ ತಪೋಮಹಿಮೆಯಿಂದ ಸಿದ್ಧವಾದ ಉತ್ತಮ ಸಂಭಾವನೆಗಳಿಂದ ಆದರಿಸಿ ಸತ್ಕರಿಸಿದನು. ಶತ್ರುಘ್ನನಿಗೆ ಅತ್ತಿಗೆಯೆನಿಸಿ ಗರ್ಭಿಣಿಯಾಗಿ ಅಲ್ಲಿಯೇ ಇರುತ್ತಿದ್ದ ಜಾನಕಿಯು - ಕ್ಷಿತಿಯು ಸಮಗ್ರವಾದ ಕೋಶದಂಡಗಳನ್ನು ಹೇಗೋ ಹಾಗೆ, ಅಂದಿನ ಇರುಳೇ ಅವಳ ಮಕ್ಕಳನ್ನು ಹಡೆದಳು. ಅಣ್ಣನಿಗೆ ಸಂತಾನಲಾಭವಾಯಿತೆಂಬ ಸುದ್ದಿಯನ್ನು ಕೇಳಿ, ಶತ್ರುಘ್ನನು - ಸೌಮನಸ್ಯವನ್ನಾಂತನು. ಬೆಳಕು ಹರಿಯುತ ಒರಲು ಅಂಜಲಿಯನ್ನೊಪ್ಪಿಸಿ, ಮುನಿಯ ಅಪ್ಪಣೆಯನ್ನು ಪಡೆದು, ರಥವನ್ನೇರಿ ಹೊರಟನು. ಮಧೂಪಘ್ನವೆಂಬ ಲವಣಾಸುರನ ಪುರದ ಬಳಿಗೆ ಬಂದನು, ರಾವಣನ ತಂಗಿಯೆನಿಸಿದ ಕುಂಭೀನಸಿಯ ಮಗನಾದ ಲವಣನೂ - ಕಪ್ಪವನ್ನು ಪಡೆಯುವಂತೆ ಕಾಡಿನಿಂದ ಪಡೆಯನ್ನು ತೆಗೆದು ಕೊಂಡು ಇದಿರ್ಗೊಂಡನು. ಆ ಲವಣನು - ಹೊಗೆಯ ಬಣ್ಣದವನಾಗಿದ್ದನು. ಕೊಬ್ಬಿನವಾಸನೆಯು ಹರಡಿದ್ದಿತು, ಬೆಂಕಿಯ ಉರಿಯಂತೆ ತಲೆಗೂದಲು ಹೊಂಬಣ್ಣವಾಗಿದ್ದಿತು, ಮಾಂಸಾಶನರಾದ ರಕ್ಕಸರಿಂದ ಆವರಿಸಲ್ಪಟ್ಟಿದ್ದನು. ಇದರಿಂದ ನಡೆದು ಬರುತಲಿರುವ ಚಿತಾಗ್ನಿಯಂತೆ ಕಾಣಬರುತಲಿದ್ದನು. ಲವಣನಿಗೆ ಅದು ಕೇಡುಗಾಲವಾಗಿದ್ದಿತು, ಅದರಿಂದಲೆ ಆಗ ಅವನು ಶೂಲಾಯುಧವನ್ನು ಹಿಡಿದಿರಲಿಲ್ಲ,

ಆ ಸಮಯವನ್ನು ನೋಡಿಯೇ ಲಕ್ಷ್ಮಣಾನುಜನು ಅವನನ್ನು ಇದಿರಿಸಿದನು, ಸಮಯವನ್ನರಿತು ಹಗೆಯನ್ನಿರಿಯ ಲೆಳಸುವವರಿಗೆ ಜಯವು ಇದಿರಾಗಿಯೇ ಇರುವುದಲ್ಲವೆ ? ಆಗ ಲವಣನು— ಆಹಾ ! ಇಂದು ನನ್ನ ಹೊಟ್ಟೆಗೆ ಮೃಗಮೇ ಮೊದಲಾದ ಆಹಾರವು ತಕ್ಕಷ್ಟು ದೊರೆಯಲಿಲ್ಲ, ಅದರಿಂದಲೇ ಹೆದರಿಪಬ್ರಹ್ಮನು-ಆಹಾರಪೂರ್ಣತೆಗಾಗಿ ನನಗೋಸ್ಕರ ನಿನ್ನನ್ನು ಅಣಿಮಾಡಿದಾನೆ, ಎಂದು ಹೆದರಿಸುತ್ತಾ, ಶತ್ರುಘ್ನನನ್ನು ಕೊಲ್ಲಲೆಳಸಿ, ಪಕ್ಕದಲ್ಲಿದ್ದ ಎತ್ತರವಾದ ಮರವನ್ನುನೋಡಿ ತುಂಗೆಯದಂಟನ್ನುಕೀಳುವ ಹಾಗೆ ಆ ತರುವನ್ನು ಬುಡಸಹಿತ ಕಿತ್ತು ಎಸೆದನು. ಶತ್ರುಘ್ನನ ಕೂರಾದ ಅಂಬುಗಳು-ಆ ಮರವನ್ನು ಮಧ್ಯದಲ್ಲಿಯೇ ತುಂಡಾಗಿ ಕತ್ತರಿಸಿ ಉದುಳಿಸಿದುದರಿಂದ ಆ ವೃಕ್ಷದ ಕುಸುಮರಜವುಮಾತ್ರವೇ ಶತ್ರುಘ್ನನಮೈಗೆತಾಗಿತು. ಆ ಮರವನ್ನು ತರಿದೊಟ್ಟುದುದನ್ನು ಕಂಡು ಮರಳಿ ಲವಣನು - ಬೇರಾಗಿ ನಿಂತಿರುವ ಮೃತ್ಯುವಿನ ಮುಷ್ಟಿಯಂತಿರುವ ತೋರವಾದ ಕೋಡುಗಲ್ಲೊಂದನ್ನೆತ್ತಿ ಇಟ್ಟನು, ಶತ್ರುಘ್ನನು-ಐಂದ್ರಾಸ್ತ್ರವನ್ನು ಪ್ರಯೋಗಿಸಿ, ಆ ಬಂಡೆಯನ್ನುಪರಮಾಣುವಿಗಿಂತಲೂ ಸೂಕ್ಷ್ಮಾಣುಗಳಾಗುವಂತೆ ಪುಡಿಪುಡಿ ಮಾಡಿದನು, ಎತ್ತರವಾದ ಒಂದು ತಾಳೆಯ ಮರವನ್ನೊಳಗೊಂಡಿರುವ ದೊಡ್ಡ ಬೆಟ್ಟವು-ಉತ್ಪಾತವಾತದಿಂದ ಹಾರಿಸಲ್ಪಟ್ಟು ಬರುತ್ತಿರುವಹಾಗೆ, ಲವಣನು ತನ್ನ ಬಲದೋಳನ್ನೆತ್ತಿ ಶತ್ರುಘ್ನನನ್ನು ಹೊಡೆದು ಕೊಲ್ಲಬೇಕೆಂದು ಅಟ್ಟಿ ಬಂದನು. ಕೂಡಲೆಶತ್ರುಘ್ನನು-ವೈಷ್ಣವಾಸ್ತ್ರದಿಂದ ಲವಣನ ಎದೆಯನ್ನು ಇರಿದನು, ತತ್ಕ್ಷಣದಲ್ಲಿಯೇ ನೆಲದಮೇಲೆ ಬಿದ್ದ ಅಸುರನು-ತನ್ನ ಮೈಯ್ಯ ಹೊರೆಯಿಂದ ಭೂಮಿಯನ್ನು ಅಲುಗಿಸಿದನು; ಆ ತಪೋವನವಾಸಿಗಳಾದ ಮುನಿಗಳ ಭಯ ಕಂಪವನ್ನು ಪರಿಹರಿಸಿದನು. ಸತ್ತು ಬಿದ್ದ ನಿಶಾಚರನ ಶಿರದಮೇಲೆ ಕಾಗೆಗಳ ಹಿಂಡು ಬಂದು ಕುಳ್ಳಿರುವಾಗಲೇ, ಅವನಿಗೆ ಪ್ರತಿಭಟನಾಗಿದ್ದ ಶತ್ರುಘ್ನನ ತಲೆಯಮೇಲೆ ದೇವತೆಗಳ ಕರಗಳಿಂದುದಿರಿದ ಪುಷ್ಪ ವೃಷ್ಟಿಯೂ ನೆಲಸಿತು. ಇಂತು ಲವಣಾಸುರನನ್ನು ಕೊಂದ ವೀರ ಶತ್ರುಘ್ನನು-ತನ್ನನ್ನು ಆಗ, ಇಂದ್ರಜಿತುವನ್ನು ಇರಿದ ತೇಜಸ್ಸಿನಿಂದ ಶೋಭಿಸುವ ಸೌಮಿತ್ರಿಗೆ ಸೋದರನನ್ನಾಗಿ ಭಾವಿಸಿದನು.

ಲೋಕಕಂಟಕನಾಗಿದ್ದ ಲವಣನು ಅಳಿದುದರಿಂದ ಕೃತ ಕೃತ್ಯರಾದ

ತಪಸ್ವಿಗಳು-ಶತ್ರುಘ್ನನನ್ನು ಬಹಳವಾಗಿ ಕೊಂಡಾಡಿದರು, ಹೊಗಳಿಕೆಯು ಬೇಕಿಲ್ಲದೆ ನಾಚಿಕೆಯಿಂದ ತಗ್ಗಿಸಿದ ಶತ್ರುಘ್ನನ ವಿಕ್ರಮ ಭೂಷಣವಾದ ಶಿರವು ಶೋಭಿಸುತಲಿದ್ದಿತು. ಮಹಾ ವೀರರಿಗೆ ಇಂತಹ ನಾಚಿಕೆಯೇ ಶೋಭಾವಹವಲ್ಲವೆ ? ಬಳಿಕ- ವಿಷಯಗಳಲ್ಲಿ ನಿಸ್ಪೃಹನಾಗಿ, ಸಾವ್ಯವಾದ ಆಕಾರದಿಂದೆಸೆವ ವಿಕ್ರಮ ಭೂಷಣನಾದ ಶತ್ರುಘ್ನನು- ಯಮುನಾ ನದಿಯ ದಡದಲ್ಲಿ ಮಧುರೆಯೆಂಬೊಂದು ನಗರವನ್ನು ಕಟ್ಟಿದನು. ಆ ಮಧುರಾನಗರಿಯು - ಮೇಲೆನಿಸಿದ ದೊರೆಯಿಂದ ಬೆಳಗುತ ಪುರಜನರ ಸಂಪದಗಳಿಂದ, ಸ್ವರ್ಗದಲ್ಲಿ ಹಿಡಿಯದೆ ಹೆಚ್ಚಿದ ಜನರಿಂದ ಬೇರೊಂದಾಗಿ ನೆಲೆಗೊಂಡ ನಗರದಂತೆ ಶೋಭಿಸುತಲಿದ್ದಿತು, ಆ ನಗರದಲ್ಲಿ ಒಂದುವೇಳೆ ಶತ್ರುಘ್ನನು- ಅರಮನೆಯ ಚಂದ್ರಶಾಲೆಯಲ್ಲಿ ನಿಂತು, ಜಕ್ಕವಕ್ಕಿಗಳಿಂದ ಬಲು ಅಂದವಾಗಿರುವ ಕಾಳಿಂದಿಯ ಹೊಳೆಯನ್ನು ನೋಡಿದನು, ಜಡೆ ಬಂಗಾರದಿಂದೊಡಗೂಡಿದ ಭೂದೇವಿಯ ಹೆರಳಸಂತಿರುವುದೆಂದು ಆನಂದಸಿದಿನು.

ಇತ್ತ - ದಶರಥನಿಗೂ, ಜನಕಭೂಪತಿಗೂ ಸಖನೆನಿಸಿ, ಮಂತ್ರದ್ರಷ್ಟನೆನಿಸಿರುವ ವಾಲ್ಮೀಕಿಯು - ವೈದೇಹಿಯ ಯಮಳರಾದ ತರಳರಿಗೆ ಜನಕ ದಶರಥರಲ್ಲಿ ತನಗಿರುವ ಪ್ರೀತಿಗನುಗುಣವಾಗಿ ಜಾತಕರ್ಮವೇ ಮೊದಲಾದ ಸಂಸ್ಕಾರಗಳನ್ನು ವಿಧಿ ಪ್ರಕಾರವಾಗಿ ನೆರವೇರಿಸಿದನು. ಆದಿ ಕವಿಯಾದ ವಾಲ್ಮೀಕಿಯು - ಅಭಿಮಂತ್ರಿಸಿದ ಕುಶಗಳಿಂದಲೂ, ಲವಗಳಿಂದಲೂ (ಗೋವಾಲ) ಆ ಶಿಶುಗಳಿಗೆ ಗರ್ಭೋಪದ್ರವವನ್ನು ಪರಿಹರಿಸಿದ್ದನಾದುದರಿಂದ ಕುಶಲವರೆಂದೇ ಕ್ರಮವಾಗಿ ನಾಮಕರಣವನ್ನು ಮಾಡಿದ್ದನು. ಆ ಮೇಲೆ ಅವರಿಗೆ ಸಾಂಗವಾಗಿ ವೇದಾಧ್ಯಯನವನ್ನು ಮಾಡಿಸಿದನು, ಅದುವರೆಗೆ ಆ ಬಾಲಕರು ಬಾಲ್ಯವನ್ನು ದಾಟಿದರು. ಬಳಿಕ ಕವಿಯು - ಕವಿಗಳಿಗೆ ಮೊದಲನೆಯ ಮಾರ್ಗವೆನಿಸಿ ತನ್ನ ಕೃತಿಯಾಗಿರುವ ರಾಮಾಯಣ ಕಾವ್ಯವನ್ನು ಪಾರಾಯಣಮಾಡಿಸಿದನು.

ತರುವಾಯ ಆ ಕುಮಾರರು- ತಮ್ಮ ತಾಯಿಯ ಬಳಿಯಲ್ಲಿ ಕಾವ್ಯರೂಪದಿಂದಿರುವ ರಾಮನ ಮಧುರವಾದ ವೃತ್ತಾಂತವನ್ನು ಇಂಪಾಗಿ ಹಾಡುತ್ತಾ, ಆಕೆಗೆ ಆತನ ಅಗಲಿಕೆಯಿಂದುಂಟಾಗಿದ್ದ ಮನೋವ್ಯಥೆ

ಯನ್ನು ಸ್ವಲ್ಪಮಟ್ಟಿಗೆ ಕಡಮೆ ಮಾಡುತಲಿದ್ದರು.

ಅತ್ತ ಅಯೋಧ್ಯಾನಗರದಲ್ಲಿ - ತ್ರೇತಾಗ್ನಿಗಳಂತೆ ತೇಜಸ್ಸುಳ್ಳ ಭರತನೇ ಮೊದಲಾದ ಮೂವರೂ ತಂತಮ್ಮ ಧರ್ಮಪತ್ನಿಯರಲ್ಲಿ ಕ್ರಮವಾಗಿ ಇಬ್ಬಿಬ್ಬರು ಮಕ್ಕಳನ್ನು ಪಡೆದರು. ಆ ಹಿಂದೆ ಅಗ್ರಜಭಕ್ತನಾದ ಶತ್ರುಘ್ನನು - ಅರಿಗಳನ್ನಿರಿಯುವವನೆಂದು ಹೆಸರುವಾಸಿಯನ್ನು ಪಡೆದಿರುವ ತನ್ನ ಹಿರಿಯಮಗನಾದ ಸುಬಾಹುವಿಗೆ ಮಧುರಾನಗರದ ರಾಜ್ಯಭಾರವನ್ನೂ, ಕಿರಿಯವನಾದ ಬಹುಶ್ರುತನಿಗೆ ವಿದಿಶಾನಗರಿಯ ದೊರೆತನವನ್ನೂ ಒಪ್ಪಿಸಿದನು. ಮತ್ತು - ಮರಳಿ ವಾಲ್ಮೀಕಿ ಮುನಿಗೆ ತಪಃಫಲದ ವೆಚ್ಚವಾಗಬಾರದೆಂದು ನೆನೆದು, ಮೈಥಿಲೀ ತನಯರಾದ ಲವಕುಶರ ರಾಮಾಯಣಗಾನದಿಂದ ನಿಶ್ಶಬ್ದಗಳಾಗಿರುವ ಮೃಗಗಳನ್ನೊಳಗೊಂಡಿರತಕ್ಕ ಆತನ ತಪೋವನವನ್ನು ಹೋಗದೆಯೇ ಮುಂದರಿದನು. ಲವಣಾಸುರ ವಧೆಯ ಸುದ್ದಿಯು ಮೊದಲೇ ಪುರಜನರಿಗೆ ವಿದಿತವಾಗಿದ್ದಿತು. ನಗರವನ್ನು ತೋರಣಾದಿಗಳಿಂದ ಬಲು ಅಂದವಾಗಿ ಅಲಂಕರಿಸಿದ್ದರು. ಬಹುಮಾನಪೂರ್ವಕವಾಗಿ ಜಿತೇಂದ್ರಿಯನಾದ ಶತ್ರುಘ್ನನನ್ನು ಇದಿರ್ಗೊಂಡರು. ಶತ್ರುಘ್ನನೂ ಬಗೆಬಗೆಯ ಶೃಂಗಾರಗಳಿಂದ ಸಂಶೋಭಿಸುತಲಿರುವ ಅಯೋಧ್ಯೆಯನ್ನು ಹೊಕ್ಕನು. ಸಭಾಮಧ್ಯದಲ್ಲಿ ಸಭಾಸದರಿಂದ ಸೇವಿಸಲ್ಪಡುತ, ಸೀತೆಯನ್ನು ಪರಿತ್ಯಾಗ ಮಾಡಿರುವುದರಿಂದ ಭೂಮಿಗೆ ಅಸಾಧಾರಣಪತಿಯಾಗಿರುವ ಅಣ್ಣನಾದ ದಾಶರಥಿಯನ್ನು ಕಂಡನು. ಕೂಡಲೆ ಅಭಿವಂದಿಸಿದನು, ರಾಮನು - ಲವಣಾಂತಕನೆನಿಸಿ ಪ್ರಣತನಾದ ಶತ್ರುಘ್ನನನ್ನು, ಕಾಲನೇಮಿಯೆಂಬ ಅಸುರನನ್ನು ಕೊಂದು ಬಂದ ಉಪೇಂದ್ರನನ್ನು ಇಂದ್ರನು ಹೇಗೋ ಹಾಗೆ ಅಭಿನಂದಿಸಿದನು, ಮತ್ತು ಅಂದಿನವರೆಗಿನ ಕುಶಲ ವೃತ್ತಾಂತವನ್ನು ತಿಳಿಸುವಂತೆ ಪ್ರಶ್ನೆಮಾಡಿದನು. ಆದರೆ-ಶತ್ರುಘ್ನನು ಕಾಲವಿಶ್ಲೇಷದಲ್ಲಿ ಪ್ರತ್ಯರ್ಪಣಮಾಡುವೆನು, ಎಂದು ಮುನಿಯ ಶಾಸನವಾಗಿದ್ದುದರಿಂದಮೈಥಿಲೀ ಸಂತತಿ ವೃತ್ತಾಂತವೊಂದನ್ನುಳಿದು ಮಿಕ್ಕ ಸಮಾಚಾರವನ್ನೆಲ್ಲ ಅಣ್ಣನಿಗೆ ಅರಿಕೆಮಾಡಿದನು.

ಆ ಮೇಲೆ ಒಂದು ಸಮಯದಲ್ಲಿ - ಆ ನಾಡಿನವನಾದ ಒಬ್ಬ ವಿಪ್ರನು - ಕೇವಲ ಬಾಲ್ಯದಲ್ಲಿಯೇ ಮೃತನಾದ ತನ್ನ ಬಾಲನನ್ನು ಎತ್ತಿ

ತಂದು, ನೃಪತಿಯಾದ ರಾಮನ ಅರಮನೆಯ ಮುಂದೆ ಆ ಶವವನ್ನು ತನ್ನ ತೊಡೆಯಮೇಲೆ ಮಲಗಿಸಿಕೊಂಡು ಗಟ್ಟಿಯಾಗಿ ಅಳತೊಡಗಿದನು. "ಎಲೆ ವಸುಂಧರೆಯೇ! ಮಹಾರಾಜರಾಗಿದ್ದ ದಶರಥನ ಕೃತಪ್ಪಿ, ರಾಮನಕೈಸೇರಿ, ನೀನು ಬಹುಕಷ್ಟತರವಾದ ಅವಸ್ಥೆಯನ್ನು ಪಡೆದುವ ರೀವಲೇ ಬಹು ಶೋಕಕ್ಕೆ ಈಡಾಗಿ ಕಾಣಬರುತ್ತಿದ್ದೀಯೆ" ಎಂದು ಹಂಬಲಿಸುತಲಿದ್ದನು. ಧರ್ಮ ಭೂಪಾಲನಾದ ರಾಮನಿಗೆ ಆ ರೋದನವೆಲ್ಲ ನಿಯು ಕೇಳಿಸಿತು. ಆ ದ್ವಿಜನ ಶೋಕಕಾರಣವನ್ನು ಕೇಳಿ ತಿಳಿದನು. ಬಲು ನಾಚಿಕೆಗೊಂಡನು, ಅಯ್ಯೋ! ಇಂದಿನವರೆಗೆ ಇಕ್ಷ್ವಾಕು ಕುಲದರಸರ ನಾಡಿನಲ್ಲಿ ಅಕಾಲ ಮೃತ್ಯುವು ಅಡಿ ಯಿಟ್ಟುದನ್ನು ಕೇಳಿದುದಿಲ್ಲವಲ್ಲಾ ಎಂದು ಕೊರಗಿದನು. ಆಸ್ಥಾನದಿಂದ ಎದ್ದು ಬಂದನು, ಹೇರಳವಾಗಿ ದುಃಖಿಸುತಲಿರುವ ಬ್ರಾಹ್ಮಣನನ್ನು ಸಂತೈಸಿದನು, ಸ್ವಲ್ಪ ಕಾಲ ಮಾತ್ರ ಕ್ಷಮಿಸಿಇರುವಂತೆ ಕೇಳಿಕೊಂಡನು, ಮೃತ್ಯುವನ್ನು ಗೆಲ್ಲಬೇಕೆಂದು ಬಗೆದು ಕುಬೇರನ ಪುಷ್ಪಕವನ್ನು ನೆನೆದನು. ಕೂಡಲೆ ಸಿದ್ಧವಾದ ವಿಮಾನವನ್ನು ಶಸ್ತ್ರಪಾಣಿಯಾಗಿ ಏರಿ ರಘುಕುಲಾಂಬುಧಿಚಂದ್ರನು ಹೊರಟನು. ಆಗ—"ಎಲೈ ದೊರೆಯೇ! ನಿನ್ನ ಪ್ರಜೆಗಳಲ್ಲಿ ಒಂದು ಬಗೆಯ ವರ್ಣಧರ್ಮವ್ಯತ್ಯಾಸವು ನಡೆಯುತಲಿದೆ, ಹುಡುಕಿ ಆ ಅಪಚಾರವನ್ನು ಪರಿಹರಿಸಿದರೆ ಆ ಮೇಲೆ ನೀನು ಕೃತಕೃತ್ಯನಾಗುವೆ" ಎಂಬೀ ರೂಪವಾದ ಒಂದು ಆಕಾಶವಾಣಿಯು ಇದಿರಿನಲ್ಲಿ ಕೇಳಬಂದಿತು, ರಾಮನು ಆ ಆಪ್ತವಚನವನ್ನಾಲಿಸಿದನು, ವರ್ಣ ಧರ್ಮ ವ್ಯತ್ಯಾಸವನ್ನು ಪರಿಹರಿಸಬೇಕೆಂದು ನೆನೆದನು, ವಿಕಾರದ ಮೂಲವನ್ನು ಹುಡುಕಲು ದಿಕ್ಕುಗಳನ್ನು ಕುರಿತು ತೆರಳಿದನು. ರಥವೇಗದಿಂದ ಧ್ವಜಪಟವು ಅಲುಗದಿದ್ದಿತು.

ಮಹಾವನದಲ್ಲಿ ನುಗ್ಗಿ ಹೋಗುತ್ತಿರುವಾಗ, ಇಕ್ಷ್ವಾಕು ಕುಲತಿಲಕನಾದ ರಾಮನು ಒಬ್ಬ ತಪಸ್ವಿಯನ್ನು ಕಂಡನು, ಆ ತಪೋಧನನು— ತನ್ನ ಎರಡುಕೈಗಳಿಂದಲೂ ಒಂದು ಮರದ ಕೊನೆಯನ್ನು ಹಿಡಿದು ತಲೆ ಕೆಳಗಾಗಿ ತೀವ್ರ ತಪವನ್ನಾಚರಿಸುತಲಿದ್ದನು. ಮರದ ತಡಿಯಲ್ಲಿ ಒಟ್ಟಿರುವ ಬೆಂಕಿಯಿಂದ ಹೊರಡುತ್ತಿರುವ ಹೊಗೆಯನ್ನು ಕೆಳಮೊಗನಾಗಿ ಮುಖದಿಂದ ಕುಡಿಯುತಲಿದ್ದನು. ಧೂಮವು ಅಡರುತಲಿದ್ದುದರಿಂದ ಆತನ

ಕಣ್ಣುಗಳು ಕೆಂಪೇರಿದ್ದುವು. ಅರಸು ಅವನನ್ನು ನೋಡಿದ ಕೂಡಲೆ, ಕುಲಗೋತ್ರಗಳನ್ನು ವಿಚಾರಿಸಿದನು, ಆ ಧೂಮಪನು - ತಾನು ಶೂದ್ರನೆಂದೂ, ತನ್ನ ಹೆಸರು ಶಂಬುಕನೆಂದೂ, ಸ್ವರ್ಗ ಸುಖವನ್ನು ಬಯಸುತಲಿರುವೆನೆಂದೂ ಅರಿಕೆ ಮಾಡಿದನು. ತಪಸ್ಸನ್ನು ಆಚರಿಸುವುದರಲ್ಲಿ ಅಧಿಕಾರಿಯುಲ್ಲದ, ಇವನ ಕತ್ತನ್ನು ಕತ್ತರಿಸಬೇಕೆಂದು ನಿಶ್ಚೈಸಿ, ಧರ್ಮನಿಯಾಮಕನಾದ ರಾಮನು ಶಸ್ತ್ರಪಾಣಿಯಾದನು. ಮತ್ತು - ಮಂಜು ಸುರಿವುದರಿಂದ ಬಾಡಿದ ರೇಕುಗಳುಳ್ಳ ತಾವರೆಯನ್ನು ಕಾವಿನಿಂದ ಕೆಳಗಿಳಿಸುವಹಾಗೆ, ಬೆಂಕಿಯ ಕಿಡಿಗಳಿಂದ ಸುಟ್ಟ ರೋಮಗಳನ್ನೊಳಗೊಂಡಿರುವ ಆ ಶಂಬುಕನ ಮುಖವನ್ನು ಕಂಠನಾಳದಿಂದ ಉರುಳಿಸಿದನು. ಅನಧಿಕಾರಿಯೆನಿಸಿರುವ ಶೂದ್ರನಾದ ಶಂಬುಕನು - ತಪ್ಪುದಾರಿಯೆನಿಸಿರುವ ಕಷ್ಟಸಾಧ್ಯವಾದ ತಪಸ್ಸಿನಿಂದಲೂ ಸ್ವರ್ಗ ಪದವಿಯನ್ನು ಪಡೆಯುತಲಿರಲಿಲ್ಲ, ಆದರೆ - ರಾಜದಂಡವನ್ನು ಪಡೆದು, ಸತ್ಪುರುಷರಿಗೆ ಲಭಿಸುವ ಸದ್ಗತಿಯನ್ನು ಹೊಂದಿದನು. “ ಮಾನವರು ಪಾಪಗಳನ್ನು ಮಾಡಿ, ರಾಜರಿಂದ ಶಿಕ್ಷೆಯನ್ನು ಅನುಭವಿಸಿದರೆ, ನಿರ್ಮಲರೆನಿಸಿ ಸುಕೃತಶಾಲಿಗಳಾದ ಸತ್ಪುರುಷರಹಾಗೆ ಸದ್ಗತಿಯನ್ನು ಪಡೆವರು ” ಎಂದು ಮಹಾನುಭಾವನಾದ ಮನುವೂ ಉದಹರಿಸಿರುವನಲ್ಲವೆ ? ಬಳಿಕ ರಘುನಾಥನು - ಶರತ್ಕಾಲದೊಡನೆ ಚಂದ್ರನು ಸೇರುವಹಾಗೆ, ದಾರಿಯುಲ್ಲಿ ಕಾಣಿಸಿಕೊಂಡ ಮಹಾ ತೇಜಸ್ವಿ ಯೆನಿಸಿದ ಅಗಸ್ತ್ಯನೊಡನೆ ಕಲೆತನು. ಕುಂಭಸಂಭವನು - ದೇವತೆಗಳಿಗೆ ತಕ್ಕುದೆನಿಸಿರುವ ಅಲಂಕಾರವನ್ನು ಆದರದಿಂದ ರಾಮನಿಗೆ ಕೊಟ್ಟನು, ಹಿಂದೆ ಕಡಲನ್ನು ಕುಡಿದು, ಮರಳಿ ಬಿಟ್ಟಾಗ, ಸಮುದ್ರನು - ತನ್ನ ಬಿಡುಗಡೆಗಾಗಿ ಕೊಟ್ಟ ಮೂಲ್ಯದಂತೆ ಆ ಅಂಗರಾಗವನ್ನು ಈ ಅಗಸ್ತ್ಯನಿಗೆ ಒಪ್ಪಿಸಿದ್ದನು. ದಾಶರಥಿಯು - ಈಚೆಗೆ ಮೈಥಿಲಿಯ ಸ್ಪರ್ಶವಿಲ್ಲದ ಕರದಿಂದ ಆ ದಿವ್ಯಪರಿಮಳವನ್ನು ಧರಿಸಿ ಆ ತಪೋವನದಿಂದ ಹಿಂದಿರುಗಿದನು, ಅದುವರೆಗೆ ಜೀವಿಸಿದ ದ್ವಿಜನ ತನುಜನು ಅಯೋಧ್ಯಾನಗರದಿಂದ ಹಿಂದಿರುಗಿದ್ದನು. ಪರಾಸುವಾಗಿದ್ದು ಮರಳಿ ಜೀವಿಸಿದ ಪುತ್ರನೊಡನೆ ಸೇರಿದ ಬ್ರಾಹ್ಮಣನು—ಅಂತಕನನ್ನೂ ಜಯಿಸಿ ರಕ್ಷಕನೆನಿಸಿದ ರಾಮನನ್ನು ಸ್ತುತಿಸಿ, ಅದರಿಂದ ಹಿಂದೆ ತಾನಾಚರಿಸಿದ್ದ ನಿಂದೆ

ಯನ್ನು ಪರಿಹರಿಸಿಕೊಂಡನು.

ತರುವಾಯ ರಾಮಚಂದ್ರನು - ಅಶ್ವಮೇಧಯಾಗವನ್ನು ಮಾಡಬೇಕೆಂದು ನೆನೆದು, ಯಜ್ಞಾಶ್ವವನ್ನು ಬಿಟ್ಟನು. ಸುಗ್ರೀವ ವಿಭೀಷಣ ಮೊದಲಾದ ಅಗಸರು - ಮೇಘಗಳು ಜಲಗಳಿಂದ ಸಸ್ಯಗಳನ್ನು ಹೇಗೋ ಹಾಗೆ ಉಪಾಯನಗಳಿಂದ ರಾಮನನ್ನು ಸಂತೋಷಗೊಳಿಸಿದರು, ಅಧ್ವರಕ್ಕಾಗಿ ಕರೆಯಲ್ಪಟ್ಟ ಮಹರ್ಷಿಗಳು- ಭೂಮಿಯಲ್ಲಿರುವ ತಂತಮ್ಮ ಸ್ಥಾನಗಳನ್ನು ಮಾತ್ರವಲ್ಲದೆ ನಕ್ಷತ್ರರೂಪವಾದ ಸ್ಥಾನಗಳನ್ನೂ ಬಿಟ್ಟು ನಾನಾದಿಕ್ಕುಗಳಿಂದಲೂ ರಾಮನನ್ನು ಕುರಿತು ಬಂದರು. ನಾಲ್ದೆಸೆಯ ಬಾಗಿಲುಗಳೆಂಬ ನಾಲ್ಕು ಮುಖಗಳನ್ನೊಳಗೊಂಡಿರುವ ಅಯೋಧ್ಯೆಯು- ಸುತ್ತಲೂ ಹತ್ತಿರದಲ್ಲಿ ಬಂದಿಳಿದಿರುವ ಮುನಿಗಳಿಂದ, ಆಗ ತಾನೆ ಜನರನ್ನು ಸೃಷ್ಟಿಸುತ್ತಿರುವ ಚತುರ್ಮುಖನ ತನುವಿನಂತೆ ಕಂಗೊಳಿಸುತಲಿದ್ದಿತು. ಆಗ ರಾಮನು - ವೈದೇಹಿಯನ್ನು ತ್ಯಜಿಸಿದುದೂ ಶ್ಲಾಘ್ಯವೆನಿಸಿದುದಾಗಿಯೇ ಇದ್ದಿತು. ಏಕೆಂದರೆ—ಪ್ರಾಚೀನಸ್ಥೂಣವೆಂದು ಹೇಳಿಸಿಕೊಳ್ಳುವ ಯಜ್ಞಶಾಲೆಯ ಒಂದು ಭಾಗವಾದ ಪ್ರಾಗ್ವಂಶದಲ್ಲಿ ಕುಳಿತಿದ್ದ ರಾಮನಿಗೆ ಸುವರ್ಣ ಪ್ರತಿಮೆಯ ರೂಪವಾದ ಸೀತೆಯೇ ನಿಜವಾದ ಜಾಯೆಯಾಗಿದ್ದಳು. ಆಮೇಲೆ ಶಾಸ್ತ್ರದಲ್ಲಿ ಹೇಳಿರುವ ವಿಧಿಗಿಂತಲೂ ಹೆಚ್ಚಿದ ಸಂಭಾರವನ್ನೊಳಗೊಂಡಿರುವ ಯಜ್ಞವು ಆರಂಭವಾಯಿತು. ಯಜ್ಞಾಚರಣೆಗೆ ವಿಘ್ನವನ್ನಾಚರಿಸುವ ರಾಕ್ಷಸರೇ ರಕ್ಷಕರಾಗಿ ನಿಂತಿದ್ದರು.

ಮೈಥಿಲಿಯ ಕುಮಾರರಾಗಿರುವ ಕುಶಲವರು - ಪ್ರಾಚೇತಸನಿಂದ ಪ್ರೇರಿತರಾಗಿ ಆ ವಾಲ್ಮೀಕಿಯು ಮೊದಲು ಅರಿತು ರಚಿಸಿರುವ ರಾಮಾಯಣ ಕಾವ್ಯವನ್ನು ಅಲ್ಲಲ್ಲಿ ಹಾಡತೊಡಗಿದರು. ಆಹಾ ! ಕಿನ್ನರ ಕಂಠರಾಗಿ ಗಾನನಿಪುಣರೆನಿಸಿರುವ ಆ ಕುಮಾರರು—ವಾಲ್ಮೀಕಿ ಮಹಾಮುನಿ ರಚಿತವಾದ ರಾಮನ ದಿವ್ಯ ಚರಿತೆಯನ್ನು ಸರಸವಾಗಿ ಹಾಡುತಲಿರಲು, ಕೇಳುವವರ ಮನವು ಪರವಶವಾಗುತಲಿದ್ದಿತು. ಆ ಮಕ್ಕಳ ರೂಪಗೀತಗಳನ್ನು ನೋಡಿ, ಕೇಳಿ, ಹರ್ಷಿತರಾದ ಯೋಗ್ಯರುಅರಿಕೆಮಾಡಲು, ಕುತೂಹಲದಿಂದ ರಾಮನು ಅವರನ್ನು ಕರೆಯಿಸಿ, ತನ್ನ ಸಹೋದರರಿಂದೊಡಗೂಡಿ, ಕೇಳಿ ಆನಂದಭರಿತನಾದನು. ಆಗಲಾ ಸಭೆಯು - ಅವರ

ಹಾಡುಗಾರಿಕೆಯಲ್ಲಿಯೇ ಮನಸ್ಸನ್ನಿಟ್ಟು ಕೇಳಿ, ಕಣ್ಣೀರನ್ನು ತಂದು ಕೊಳ್ಳುತಲಿದ್ದಿತು, ಅದರಿಂದಲೇ ಮುಂಜಾನೆಯೊಳಗೆ ಮಂಜು ಸುರಿಯುತ ಲಿರುವಲ್ಲಿ ಗಾಳಿಯಿಲ್ಲದ ವನಭೂಮಿಯು ಹೇಗೋ ಹಾಗೆ ಕಾಣಬಂದಿತು, ಮತ್ತು - ಆತರಣಿ ಕುಲಲಾಮನಿಗೂ, ಆ ತರಳರಿಗೂ ವಯೋ ವೇಷಗ ಳಲ್ಲಿ ಮಾತ್ರವೇ ಭೇದವನ್ನೊಳಗೊಂಡಿರುವ ಹೋಲಿಕೆಯನ್ನು ಕಂಡು ಸಭಾಜನರೆಲ್ಲರೂ ರೆಪ್ಪೆ ಬಡಿಯದೆಯೂ, ಅಲುಗದೆಯೂ ಕುಳಿತಿದ್ದರು. ಆ ಯಜ್ಞಶಾಲೆಯಲ್ಲಿ ನೆರದಿದ್ದ ಜನರು-ಆ ಹುಡುಗರ ಜಾಣತನಕ್ಕಿಂತಲೂ, ಪ್ರೀತಿ ಪೂರ್ವಕವಾಗಿ ಕೊಡುತಲಿರುವ ದಾನಗಳಲ್ಲಿ ರಾಮನ ನಿಸ್ಪೃಹತ್ವ ದಿಂದ ಹೇರಳವಾಗಿ ಅಚ್ಚರಿಗೊಂಡರು. ರಾಮನು—ಆ ಬಾಲಕರನ್ನು ನೋಡಿ, „ ಎಲೈ ಮಕ್ಕಳಿರಾ ! ನಿಮಗೆ ಈ ಗೀತವಿದ್ಯೆಯನ್ನು ಹೇಳಿ ಕಲಿಸಿ ಕೊಟ್ಟವರಾರು ? ಮತ್ತು- ಈ ಕಾವ್ಯವನ್ನು ರಚಿಸಿದ ಕವಿಯು ಯಾರು ? " ಎಂದು ಕೇಳಲು, ಕುಶಲವರು - ತಮಗೆ ಶಿಕ್ಷಕನೂ, ಕಾವ್ಯಕರ್ತನೂ, ವಾಲ್ಮೀಕಿಮುನಿಯೇ ಎಂದು ಅರಿಕೆ ಮಾಡಿದರು.

ರಾಮಚಂದ್ರನು - ತಮ್ಮಂದಿರಿಂದೊಡಗೂಡಿ, ವಾಲ್ಮೀಕಿಮುನಿಯ ಸನ್ನಿಧಿಗೆ ತೆರಳಿ, ತನ್ನ ದೇಹವನ್ನುಮಾತ್ರ ಉಳಿಸಿಕೊಂಡು, ರಾಜ್ಯವ ನ್ನೆಲ್ಲ ಆತನಿಗೆ ಸಮರ್ಪಿಸಿದನು. ಆಗಲಾ ದಯಾಳುವಾದ ಪ್ರಾಚೇತ ಸನು - ಈ ತರಳರು ನಿನ್ನ ಆತ್ಮಜರೆಂದೂ, ಸೀತೆಯನ್ನು ಸ್ವೀಕರಿಸಬೇ ಕೆಂದೂ ರಾಮನನ್ನು ಯಾಚಿಸಿದನು. ಅದಕ್ಕೆ ರಾಘವನು - ಹರ್ಷವಿ ಷಾದಗಳಿಂದೊಡಗೂಡಿ, ಎಲೈ ತಂದೆಯೇ ! ನಮ್ಮ ಕಣ್ಣೆದಿರಿಗೆ ನಡೆದ ಅಗ್ನಿ ಪ್ರವೇಶದಿಂದ ನಿನ್ನ ಸೊಸೆಯಾದ ಈ ಸೀತೆಯು ಪರಿಶುದ್ಧಳೆಂದು ನಮಗೆ ನಂಬುಗೆಯುಂಟು, ಆದರೆ - ರಕ್ಕಸನು ನಡೆಸಿದ ದುರುಳತನದಿಂದ ಇಲ್ಲಿನ ಪ್ರಜೆಗಳು ಅದನ್ನು ನಂಬಲಿಲ್ಲ ಎಂದನು. ಮತ್ತು— ಈ ಜಾನ ಕಿಯು ಈಗಲೂ ತನ್ನ ಒಳ್ಳೆಯ ನಡತೆಯ ವಿಷಯವಾಗಿ ಈ ಪ್ರಜೆಗಳಿಗೆ ನಂಬುಗೆಯನ್ನುಂಟುಮಾಡಲಿ, ಬಳಿಕ ನಾನು- ಪುತ್ರವತಿಯಾದ ಈ ಸೀತೆ ಯನ್ನು ನಿನ್ನ ಆಜ್ಞೆಯಿಂದ ಪರಿಗ್ರಹಿಸುವೆನು ಎಂದು ಬಿನ್ನವಿಸಿದನು. ರಾಮನಿಂತು ಪ್ರತಿಜ್ಞೆಯನ್ನು ಮಾಡಲು, ವಾಲ್ಮೀಕಿಯು - ತನ್ನ ನಿಯ ಮಗಳಿಂದ ತಪಸ್ಸಿದ್ಧಿಯನ್ನು ಬರಮಾಡುವಹಾಗೆ, ಶಿಷ್ಯರಮೂಲಕ

ಸೀತೆಯನ್ನು ತಪ್ಪೋವನದಿಂದ ಕರೆಯಿಸಿದನು. ಮೂರನೆಯ ದಿವಸ ರಘು ಪುಂಗವನು - ಪ್ರಕೃತಕಾರ್ಯ ನಿರ್ವಾಹಕ್ಕಾಗಿ ತನ್ನ ಪುರಜನರನ್ನೆಲ್ಲ ಕರೆಯಿಸಿ, ಒಂದೆಡೆಯಲ್ಲಿ ಸೇರಿಸಿ, ಅಲ್ಲಿಗೆ ವಾಲ್ಮೀಕಿ ಮುನಿಯನ್ನು ಬರುವಂತೆ ಹೇಳಿ ಕಳುಹಿಸಿದನು.

ತರುವಾಯ - ಉದಾತ್ತಾದಿ ಸ್ವರದಿಂದಲೂ, ಶಬ್ದಶುದ್ಧಿ ರೂಪವಾದ ಸಂಸ್ಕಾರದಿಂದಲೂ, ಒಡಗೂಡಿರುವ ಸಾವಿತ್ರೀಋುಕ್ಕಿನಿಂದ ತೇಜೋರಾಶಿಯಾದ ಸೂರ್ಯನನ್ನು ಹೇಗೋ ಹಾಗೆ, ಮುನಿಯು- ಪುತ್ರರಿಂದ ಸಹಿತಳಾದ ಸೀತೆಯೊಂದೊಡಗೂಡಿ ತೇಜಸ್ವಿಯಾದ ರಾಮನನ್ನು ಸೇವಿಸಿದನು. ಉಟ್ಟಿರುವ ಕಾಷಾಯ ವಸ್ತ್ರದಿಂದಲೂ, ಹೆಜ್ಜೆಯಲ್ಲಿ ನಟ್ಟಿರುವ ದೃಷ್ಟಿಯಿಂದಲೂ ಒಡಗೂಡಿರುವ ಸೀತೆಯು - ಶಾಂತವೂ ಪ್ರಸನ್ನವೂ ಆಗಿರುವ ಶರೀರದಿಂದಲೇ ಸಾಧ್ವೀ ಶಿರೋಮಣಿಯೆಂದು ಎಲ್ಲರೂ ಊಹಿಸುತಲಿದ್ದರು ಮತ್ತು - ಆಕೆಯ ದೃಷ್ಟಿಪಥದಿಂದ ತಮ್ಮ ನೋಟಗಳನ್ನು ಹಿಂದಿರುಗಿಸಿ, ಮಾಗಿದ ಗೊನೆಗಳನ್ನೊಳಗೊಂಡಿರುವ ಬತ್ತದ ಪೈರುಗಳಂತೆ ಸರ್ವರೂ ಬಾಗಿದ ಮೊಗವುಳ್ಳವರಾಗಿದ್ದರು.

ಮುನಿಯು-ಒಂದು ದರ್ಭಾಸನದಮೇಲೆ ಬಂದು ಕುಳಿತನು, ಕೂಡಲೆ ಜಾನಕಿಯನ್ನು ನೋಡಿ, ಮಗೂ ! ಸೀತೆ ! ಪತಿಯ ಇದಿರಿಗೆ ನಿನ್ನ ಸದ್ವೃತ್ತದ ವಿಷಯದಲ್ಲಿ ಈ ಪ್ರಜೆಗಳಿಗಿರುವ ಸಂಶಯವನ್ನು ತೊಲಗಿಸಿ ಅವರನ್ನು ಮೆಚ್ಚಿಸು. ಎಂದು ಶಾಸನ ಮಾಡಿದನು.

ಆ ಹಿಂದೆ ಭೂಮಿಜೆಯು - ವಾಲ್ಮೀಕಿ ಮುನಿಶಿಷ್ಯನು ಕೊಟ್ಟ ಪುಣ್ಯ ತೀರ್ಥದಿಂದ ಆಚಮನಮಾಡಿ, « ವಿಶ್ವಂಭರೆಯೆನಿಸಿದ ಎಲೌ ಭೂದೇವಿಯೇ, ಈ ನಾನು - ಪತಿಯ ವಿಷಯದಲ್ಲಿ ಮಾತಿನಿಂದಲಾಗಲೀ, ಮನಸ್ಸಿನಿಂದಲಾಗಲೀ, ನಡತೆಯಿಂದಲಾಗಲೀ, ತಪ್ಪಿ ನಡೆದುದಿದ್ದುದೇ ಸತ್ಯವಾಗಿದ್ದರೆ ನನ್ನನ್ನು ನಿನ್ನ ಗರ್ಭದಲ್ಲಿ ಧರಿಸು » ಎಂದು ಸತ್ಯವಾಣಿಯನ್ನು ಉದಹರಿಸಿದಳು. ಸತೀಶಿರೋಮಣಿಯಾದ ಆ ಮಹಾದೇವಿಯು ಹಾಗೆಂದ ಕೂಡಲೆ, ಮಿಂಚಿನ ಹೊಳಪಿನಂತೆ ಬೆಳಕಿನ ರಾಶಿಯೊಂದು ಭೂಮಿಯ ರಂಧ್ರದಿಂದ ಮೇಲಕ್ಕೆದ್ದಿತು. ಆ ತೇಜೋಮಂಡಲದಲ್ಲಿ-ನಾಗರಾಜನ ಹೆಡೆಯಮೇಲಣ ಸಿಂಹಾಸನದಲ್ಲಿ ಕುಳಿತಿರುವ ಸಮುದ್ರರಶನೆಯ

ನಿಸಿದ ವಸುಂಧರೆಯು ಕಾಣಿಸಿಕೊಂಡಳು. ಮತ್ತು ಪತಿಯನ್ನೇ ದುರ ದುರನೆ ದಿಟ್ಟಿಸಿ ನೋಡುತಲಿರುವ ಸೀತೆಯನ್ನು ಆಕೆಯ ವಲ್ಲಭನು- ಬೇಡ ಬೇಡವೆಂದು ಹೇಳುತ್ತಿರುವಾಗಲೇ ತನ್ನ ತೊಡೆಯಮೇಲೆ ಕೂಡಿಸಿಕೊಂ ಡು ಪಾತಾಳವನ್ನು ಹೊಕ್ಕಳು. ಮರಳಿ ಮಹೀದೇವಿಯು- ಮಹಿಳೆಯ ನ್ನು ಒಪ್ಪಿಸುವಳೆಂದು ಬಯಸುತಲಿದ್ದ ಬಿಲ್ಲಾಳಾದ ರಾಮನಿಗೆ ಧರೆಯ ವಿಷಯದಲ್ಲಿ ಉಂಟಾದ ರೋಷದ ಸಡಗರವನ್ನು, " ಆಗತಕ್ಕುದನ್ನು ( ವಿಧಿಯನ್ನು ) ಮೀರಲು ಯಾರಿಗೂ ಆಳವಲ್ಲ, " ಎಂದು ಹೇಳಿ ಬ್ರಹ್ಮ ನು ಶಮನಮಾಡಿದನು.

ಯಜ್ಞ ಭಾಗವೆಲ್ಲ ನೆರವೇರಿತು, ತನ್ನಿಂದ ಗೌರವಿಸಲ್ಪಟ್ಟ ಮುನಿಗ ಳನ್ನೂ, ಮಿತ್ರರನ್ನೂ, ಪ್ರಜಾಪಾಲಕನಾದ ರಾಮನು- ತಂತಮ್ಮ ಸ್ಥಾನಗ ಳಿಗೆ ಕಳುಹಿಸಿಕೊಟ್ಟನು, ಸೀತೆಯಲ್ಲಿದ್ದ ಪ್ರೀತಿಯನ್ನು ಆಕೆಯ ಮಕ್ಕ ಳಾದ ಕುಶಲವರಲ್ಲಿಟ್ಟನು. ತರುವಾಯ ಭರತನ ಸೋದರದ ಮಾವ ನಾದ ಯುಧಾಜಿತ್ತಿನ ಅನುಮತಿಯಂತೆ ಬಹಳವಾದ ಐಶ್ವರ್ಯದೊಡನೆ ಸಿಂಧುದೇಶವನ್ನು ಭರತನಿಗೆ ಒಪ್ಪಿಸಿದನು, ಭರತನು ಆ ಸಿಂಧುದೇ ಶಕ್ಕೆ ತೆರಳಿ, ಅಲ್ಲಿದ್ದ ಗಂಧರ್ವರನ್ನೆಲ್ಲ ಕಾಳಗದಲ್ಲಿ ಗೆದ್ದು' ಕೈಲಿದ್ದ ಆಯುಧಗಳನೆಲ್ಲ ಬಿಸುಡಿಸಿ, ವೀಣೆಯೊಂದನ್ನು ಮಾತ್ರವೆ ಅವರು ಹಿಡಿದಿ ರುವಂತೆ ಮಾಡಿದನು, ಮತ್ತು - ಅಭಿಷೇಕಕ್ಕೆ ಅರ್ಹರಾಗಿದ್ದ ತನ್ನ ಮಕ್ಕಳಲ್ಲಿ ತಕ್ಷನೆಂಬುವವನಿಗೆ ತಕ್ಷಶಿಲೆಯೆಂಬ ರಾಜಧಾನಿಯಲ್ಲಿಯೂ, ಪುಷ್ಕಲನೆಂಬುವವನಿಗೆ ಪುಷ್ಕಲಾವತಿಯೆಂಬ ನಗರಿಯಲ್ಲಿಯೂ ಪಟ್ಟಗಟ್ಟಿ ಮರಳಿ ರಾಮನ ಸನ್ನಿಧಿಗೆ ಬಂದನು. ಸೌಮಿತ್ರಿಯೂ - ರಘುನಾಥನ ಶಾಸನದಿಂದ, ತನ್ನ ಪುತ್ರರಾದ ಅಂಗದ ಚಂದ್ರಕೇತುಗಳೆಂಬಿಬ್ಬರನ್ನೂ ತಾರಾಪಥ ದೇಶಗಳಿ ಗರಸರನ್ನಾಗಿ ಮಾಡಿದನು.

ಇಂತು ರಾಮಾದಿಗಳು - ತಂತಮ್ಮ ಮಕ್ಕಳಿಗೆ ರಾಜ್ಯಾಭಿಷೇಕ ವನ್ನು ಮಾಡಿ ಸುಖದಿಂದಿರುವಲ್ಲಿ, ಕಾಲವಶದಿಂದ ದಿವಂಗತರಾದ ಕೌಸಲ್ಯೆ ಮೊದಲಾದ ಜನನಿಯರಿಗೆ ಕ್ರಮವಾಗಿ ಉತ್ತರಕ್ರಿಯೆಗಳನ್ನು ನೆರವೇರಿಸಿ ದರು. ತರುವಾಯ ಒಂದು ಸಮಯದಲ್ಲಿ - ಅಂತಕನು ಮುನಿವೇಷಧಾರಿ ಯಾಗಿ ಬಂದು, ರಾಘವನನ್ನು ಕಂಡು, ಎಲೈ ದಾಶರಥಿಯೇ ! ಗುಟ್ಟಾಗಿ

ಮಾತನಾಡುತಲಿರುವ ನಮ್ಮ ರಹಸ್ಯವನ್ನು ಯಾವನು ಭಂಗಪಡಿಸುವನೋ ಅಂಥವನನ್ನು ನೀನು ತೊರೆಯಬೇಕು ಎಂದು ಹೇಳಿದನು. ರಾಮನು ಹಾಗೆಯೇ ಆಗಲೆಂದು ಸಮ್ಮತಿಸಿದನು. ಕೂಡಲೆ ಕಾಲನು - ಋಷಿವೇಷ ವನ್ನು ಬಿಟ್ಟು, ನಿಜರೂಪದಿಂದ ಕಾಣಿಸಿಕೊಂಡು, ಎಲೈ ರಾಮಚಂದ್ರನೇ! ನಿನ್ನ ಅವತಾರದಕೆಲಸವು ನೆರವೇರಿದೆ. ಬ್ರಹ್ಮನ ಶಾಸನದಿಂದ ನೀನಿನ್ನು ಸ್ವರ್ಗವನ್ನು ಕುರಿತು ಹೊರಡಬೇಕು ಎಂದನು. ಯಾರನ್ನೂ ಒಳಗೆ ಬಿಡದಂತೆ ಶಪಥದಿಂದ ಬಾಗಿಲನ್ನು ಕಾಯುತಲಿದ್ದ ಲಕ್ಷ್ಮಣನು ಜಾಣನಾ ಗಿದ್ದರೂ, ಅದೇಸಮಯದಲ್ಲಿ ರಾಮನ ದರ್ಶನವನ್ನು ಬಯಸಿಬಂದ ದುರ್ವಾ ಸಮುನಿಯನ್ನು ಕಂಡು, ಒಳಗೆ ಬಿಡದೆಹೋದರೆ ಶಾಪಕೊಡುವನೆಂದು ಹೆದರಿ, ಕಾಲರಾಮರ ಸಮಯವನ್ನು ಭೇದಿಸಿದನು. ಆಗ ರಾಮನು - ಲಕ್ಷ್ಮಣನನ್ನು ಕರೆದು, ಎಲೈ ಸೌಮಿತ್ರಿಯೇ ! ನೀನಿನ್ನು ಬೇಗನೆ ಹೊರಡು, ಧರ್ಮಕ್ಕೆ ಲೋಪವುಂಟಾಗಬಾರದು, ಸಾಧುಗಳಿಗೆ ವಧೆ, ತ್ಯಾಗ, ಎಂಬಿವೆರಡೂ ಸಮವೆನಿಸಿರುವುದು ಎಂದನು. ಯೋಗಮಾರ್ಗವನ್ನು ಬಲ್ಲವನಾಗಿದ್ದ ಲಕ್ಷ್ಮಣನು - ಸರಯೂ ತೀರಕ್ಕೆಬಂದು, ತನ್ನ ದೇಹತ್ಯಾ ಗದಿಂದ ಅಣ್ಣನ ಪ್ರತಿಜ್ಞೆಯನ್ನು ಸಾರ್ಥಕವಾದುದನ್ನಾಗಿ ಮಾಡಿದನು.

ಬಳಿಕ ರಾಘವನು - ತನ್ನ ನಾಲ್ಕನೆಯ ಒಂದುಪಾಲು ತನಗಿಂತ ಮೊದಲು ನಾಕಲೋಕವನ್ನೈದಲು, ಮುಕ್ಕಾಲಿನಿಂದ ನೆಲದಲ್ಲಿ ನಿಂದಿರುವ ಧರ್ಮದಂತೆ, ತಾನೂ ಅತಂತ್ರನಾಗಿ ನಿಂತನು. ಅಲ್ಲದೆ, ಸ್ವಲ್ಪ ಕಾಲದಲ್ಲಿಯೇ- ಹಗೆಗಳೆಂಬ ನಾಗಗಳಿಗೆ ಅಂಕುಶದಂತಿರುವ ಕುಶಕುಮಾರನನ್ನು ಕುಶಾ ವತಿಯೆಂಬ ನಗರಿಯಲ್ಲಿ ನಿಲ್ಲಿಸಿದನು. ಹಾಗೆಯೇ ಮೃದುಮಧುರ ಭಾಷಣ ಗಳಿಂದ ಸಾಧುಗಳನ್ನಾನಂದಗೊಳಿಸುವ ಲವನೆಂಬ ಪುತ್ರನನ್ನು - ಶರಾವತಿ ಯೆಂಬ ನಗರದಲ್ಲಿ ನೆಲೆಗೊಳಿಸಿ, ಅನುಜರಾದ ಭರತಾದಿಗಳಿಂದ ಸಹಿತನಾಗಿ, ಪತಿಯಲ್ಲಿನ ಪ್ರೇಮದಿಂದ ಮನೆಗಳನ್ನುಳಿದು ಬಂದ ಅಯೋಧ್ಯೆಯೊಡನೆ ಉತ್ತರಾಭಿಮುಖನಾಗಿ ಹೊರಟನು. ಆ ರಾಮನ ಚಿತ್ತವನ್ನು ಬಲ್ಲ ಹರಿ ರಾಕ್ಷಸರೂ - ಕದಂಬಕುಸುಮದಂತೆ ಉದಿರುತ್ತಿರುವ ತೋರವಾದ ಪ್ರಜೆ ಗಳ ಕಣ್ಣೀರಿನ ಹನಿಗಳಿಂದ ನೆನೆದಿರುವ ಆತನ ಹಾದಿಯನ್ನು ಅನುಸರಿಸಿ ಹೊರಟರು. ಭಕ್ತವತ್ಸಲನಾದ ರಾಮನು - ಸ್ವರ್ಗಕ್ಕೆ ಕರೆದೊಯ್ಯಲು

ಇಳಿದುಬಂದಿರುವ ವಿಮಾನವನ್ನು ಏರಲಿಕ್ಕೆ, ತನ್ನನ್ನು ಹಿಂಬಾಲಿಸಿರುವ ಪ್ರಜೆಗಳಿಗೆ ಸರಯೂವೇಣಿಯನ್ನು ಏಣಿಯನ್ನಾಗಿ ಮಾಡಿದನು. ಆಗಲಾ ಸರಯೂ ನದಿಯಲ್ಲಿ ಮುಳುಗುತಲಿರುವವರ ಗದ್ದಲವು - ಗೋವುಗಳ ಪ್ರತರಣದಂತೆ ಎಂದರೆ ಹಾರಾಟದಂತೆ ಇದ್ದುದರಿಂದಲೇ, ಆ ಪ್ರದೇಶವು ಇಂದಿಗೂ ಈ ಭೂಮಿಯಲ್ಲಿ ಗೋಪ್ರತರವೆಂಬ ಪಾವನವಾದ ತೀರ್ಥವೆಂದು ಹೆಸರುವಾಸಿಗೆ ಬಂದಿತು. ಬಳಿಕ ಪ್ರಭುವಾದ ಶ್ರೀರಾಮನು - ದೇವತೆಗಳ ಅಂಶಗಳಿಂದ ಅವತರಿಸಿದ್ದ ಸುಗ್ರೀವ ಮುಂತಾದವರು ತಂತಮ್ಮ ಮೂಲಸ್ಥಾನಗಳನ್ನು ಸೇರಿದರು, ಹಾಗೆಯೇ ದೇವಭೂಮಿಯನ್ನು ಸೇರಿದ, ಪ್ರಜೆಗಳು ಹೊಸಬರಾದ ದೇವತೆಗಳಾಗಲು, ಅವರಿಗೆಲ್ಲ ಬೇರೊಂದು ಸ್ವರ್ಗವನ್ನು ಕಲ್ಪಿಸಿಕೊಟ್ಟನು.

ಇಂತು ಶ್ರೀಮಹಾವಿಷ್ಣುವು - ಭೂಲೋಕದಲ್ಲಿ ಮನುಜರೂಪದಿಂದ ರಾಮನಾಗಿ ಅವತರಿಸಿ, ದೇವತೆಗಳಿಗೆ ಕರ್ತವ್ಯವಾಗಿದ್ದ ರಾವಣನ ಶಿರಶ್ಛೇದವೆಂಬ ಕಾರ್ಯವನ್ನು ನೆರವೇರಿಸಿ, ಲಂಕಾನಾಥನಾದ ವಿಭೀಷಣ, ಪವನತನಯನಾದ ಹನುಮಂತ ಎಂಬೀ ಇಬ್ಬರನ್ನು, ಉತ್ತರದಿಕ್ಕಿನ ಹಿಮಾಲಯದಲ್ಲಿಯೂ, ದಕ್ಷಿಣದೆಶೆಯೊಳಿರುವ ಚಿತ್ರಕೂಟದಲ್ಲಿಯೂ, ಕ್ರಮವಾಗಿ ಎರಡು ಜಯಸ್ತಂಭಗಳಂತೆ ನೆಲೆಗೊಳಿಸಿ, ಸರ್ವಲೋಕಕ್ಕೂ ಆಶ್ರಯುವಾಗಿರುವ ತನ್ನ ದಿವ್ಯದೇಹವನ್ನು ಪ್ರವೇಶಿಸಿದನು.

ಇಂತು ಶ್ರೀರಾಮ ಸ್ವರ್ಗಾರೋಹಣವೆಂಬ ಹದಿನೈದನೆಯ
ಅಧ್ಯಾಯಂ.



ಶ್ರೀ ಶಾರದಾಂಬಾಯೈನಮಃ.

# ಹ ದಿ ನಾ ರ ನೆ ಯ ಅ ಧ್ಯಾ ಯ ೦.

ಸೂಚನೆ || ಇರುಳೊಳ್ ಮಹಿಳೆಯ ವಚನದೆ |
ತೆರಳಿದ ನಾ ಕುಶ ಸಯೋಧ್ಯೆ ಯಾಳ್ವಿಕೆ ಗಾಗಳ್ ||
ಸರಯೂ ಕೇಳಿಯೊಳೈತಂ |
ದುರಗೇಂದ್ರನಿ ನಾ ಕುಮುದ್ವ ತೀಶನು ಪಡೆದಂ ||

ಶ್ರೀರಾಮನು ಕೈವಲ್ಯವನ್ನು ಪಡೆದನಷ್ಟೆ? ಆಮೇಲೆ - ಹುಟ್ಟಿನಲ್ಲಿಯೂ, ಗುಣಗಳಲ್ಲಿಯೂ ಹಿರಿಯವನಾಗಿರುವ ಕುಶನನ್ನು, ಮಿಕ್ಕ ಏಳುಮಂದಿ ವೀರರಾದ ತಮ್ಮಂದಿರೂ - ಪ್ರತಿಯೊಂದು ಉತ್ತಮವಸ್ತುವಿಗೂ ಗಣಿಯನ್ನಾಗಿ ಮಾಡುತ್ತಿದ್ದರು; ಅಣ್ಣತಮ್ಮಂದಿರ ಹೊಂದಿಕೆಯೆಂಬುದು ಅವರ ತಲೆಮಾಂತರದಿಂದಲೂ ಎಡೆ ಬಿಡದೆ ಅನುಸರಿಸಿಕೊಂಡೇ ಬಂದಿದೆಯಲ್ಲವೆ? "ವ್ಯವಸಾಯ, ವ್ಯಾಪಾರ, ಕೋಟೆಕಟ್ಟುವುದು, ಕೆರೆ ತೊರೆಗಳಿಗೆ ಸೇತುವೆ ಕಾಲುವೆ ಮೊದಲಾದವುಗಳಿಂದ ಜಲಸಮೃದ್ಧಿಯನ್ನು, ಹೆಚ್ಚಿಸಿ, ಬೆಳೆ ಗಣಿಮಾಡುವುದು, ಕಾಡುಗಳಲ್ಲಿ ಆನೆಗಳನ್ನು ಹಿಡಿಸುವುದು ಗಣಿಗಳಿಂದ ಚಿನ್ನವನ್ನೆತ್ತಿಸುವುದು, ಊರು ಕೇರಿಗಳನ್ನು ಹೆಚ್ಚಿಸುವುದು, ಹುಟ್ಟುವಳಿಯನ್ನು ಹೆಚ್ಚಿಸುವುದು ಈ ಮೊದಲಾದವುಗಳಿಂದ ಅರಸು ಅಭಿವೃದ್ಧಿಯಲ್ಲಿದ್ದರೂ, ಮರಳಿ ಮತ್ತಷ್ಟು ಏಳಿಗೆಗೆ ತರುತ್ತಲೇ ಇರಬೇಕು," ಎಂಬ ನೀತಿಯನ್ನನುಸರಿಸಿ ಆ ಕುಶನೇ ಮೊದಲಾದ ಅರಸರು- ಸೇತು, ವಾರ್ತೆ, ಗಜಬಂಧ ಮುಂತಾದವುಗಳಿಂದ ಸಾರ್ಥಕವಾದ ಉಚ್ಛ್ರಾಯವನ್ನು ಹೊಂದುತಲಿದ್ದರೂ, ಸಮುದ್ರಗಳು ತಂತಮ್ಮ ಮೇರೆಗಳನ್ನು ಮೀರದಿರುವಹಾಗೆ, ತಂತಮ್ಮ ದೇಶಗಳ ಎಲ್ಲೆಗಳನ್ನು ಅತಿಕ್ರಮಿಸಿ ಹೋಗದೆ ಇರುತ್ತಿದ್ದರು. ಚತುರ್ಭುಜನೆನಿಸಿದ ವಿಷ್ಣುವಿನ ಅವತಾರವಾಗಿದ್ದ ರಾಮನೇ ಮೊದಲಾದ ನಾಲ್ವರನ್ನು ಮೂಲಕಾರಣವನ್ನಾಗಿ ಪಡೆದು ಅನವರತವೂ ದಾನಪರರಾಗಿದ್ದ ಕುಶ ಮುಂತಾದ ಎಂಟುಮಂದಿಯುವಂಶವು - ಚತುರ್ಮುಖನು ಹಾಡಿದ ಎಂಟು ಬಗೆಯಾದ ಸಾಮಗಳಿಂದ

ಹುಟ್ಟಿ, (ದಾನ) ಮದ ಧಾರೆಗಳಿಂದ ತುಂಬಿರುವ ಅಷ್ಟದಿಗ್ಗಜಗಳ ಸಂತತಿಯಹಾಗೆ, ಎಂಟುಕವಲಾಗಿ ಒಡೆದು, ಭೂಮಂಡಲದಲ್ಲಿ ಹರಡಿತು.

ಬಳಿಕ ಒಂದುದಿವಸ ನಟ್ಟಿರುಳಿನಲ್ಲಿ ಕುಶನು - ಮಲಗುವಮನೆಯೊಳಗೆ ಹಾಸಿಗೆಯಮೇಲೆ ಎಚ್ಚರದಿಂದಲೇ ಪವಳಿಸಿದ್ದನು. ಜನರೆಲ್ಲ ನಿದ್ರಿಸುತಲಿದ್ದರು. ದೀವಿಗೆಗಳು ಅಲುಗದಿದ್ದುವು. ಅಂತಹಸಮಯದಲ್ಲಿ ಹಿಂದೆಲ್ಲಿಯೂ ಕಾಣಬರದಿರುವ ಒಬ್ಬವನಿತೆಯನ್ನು ಕಂಡನು. ಪತಿಯನ್ನಗಲಿರುವ ವೇಷವನ್ನುತಾಳ್ದ ಆವನಿತೆಯು - ಸಜ್ಜನರಿಗೆ ತಕ್ಕುದೆನಿಸಿರುವ ರಾಜ್ಯಸಮೃದ್ಧಿಯನ್ನು ಪಡೆದವನೂ, ದೇವೇಂದ್ರನಂತೆ ಬೆಳಗುವವನೂ, ಹಗೆಗಳನ್ನಡಗಿಸಿದವನೂ, ಬಂಧು ಸಂಪತ್ತಿಯುಳ್ಳವನೂ ಆಗಿರುವ ಆ ಕುಶಕುಮಾರನ ಇದಿರಿಗೆ ಜಯಜಯವೆಂದು ಹರಸುತ್ತಾ ನಿಂತು, ಕರಗಳನ್ನು ಜೋಡಿಸಿ, ಅಂಜಲಿಯನ್ನೊಪ್ಪಿಸಿದಳು.

ಕುಶನು ಬಲು ಅಚ್ಚರಿಗೊಂಡನು. ಮಲಗಿದ್ದವನು ಶರೀರದ ಪೂರ್ವಭಾಗದಿಂದ ಸ್ವಲ್ಪಮಾತ್ರ ಮೇಲಕ್ಕೆದ್ದು ಬಲದ ಅಂಗಯ್ಯನ್ನು ತಲೆಯ ಪಕ್ಕಕ್ಕೆ ಊಡುಮಾಡಿನೋಡಿದನು, ಎಲ್ಲಿಯೂ ಪ್ರವೇಶಕ್ಕೆ ಅವಕಾಶವಿಲ್ಲದಂತೆ ಬಾಗಿಲುಗಳನ್ನು ಮುಚ್ಚಿ ಭದ್ರಪಡಿಸಿದೆ. ಆದರೂ, ಕನಡಿಯ ಒಳಹೊಗುವ ಪ್ರತಿಬಿಂಬ ರೂಪದಂತೆ ಮನೆಯೊಳಗೆ ಬಂದಿರುವ ಆ ವನಿತೆಯನ್ನು ಕುರಿತು ಇಂತೆಂದನು: -

ಎಲೆ ಸಾಧ್ವಿ ! ಹೊಗಲಳವಲ್ಲದ ಆವರಣದಿಂದೊಡಗೂಡಿರುವ ಈ ಮನೆಯೊಳಗೆ ಹೇಗೆಬಂದೆ ? ನಿನಗೆ ಅಂತಹಯೋಗ ಮಹಿಮೆಯೂ ಇರುವಂತೆ ಕಾಣುವುದಿಲ್ಲ ? ತಾವರೆಯ ಬಳ್ಳಿಯು - ಹಿಮದಿಂದುಂಟಾದ ಉಪದ್ರವವನ್ನು ಹೇಗೋಹಾಗೆ, ದುಃಖಿಸುವವರ ಆಕಾರವನ್ನು ಪಡೆದಿದ್ದೀಯೆ; ಎಲೌ ಸುಮಂಗಲಿ ! ನೀನುಯಾರು ? ಮತ್ತು ಯಾರಪತ್ನಿ? ಇಂತಹನೀನು ನಾನಿರುವ ಇಲ್ಲಿಗೆ ಬರಲು ಕಾರಣವೇನು ? ಜಿತೇಂದ್ರಿಯರಾಗಿರುವ ರಘುಕುಲದವರ ಮನಸ್ಸು - ಪರಸ್ತ್ರೀಯರಲ್ಲಿ ಪ್ರವರ್ತಿಸತಕ್ಕದಲ್ಲ ಎಂಬುದನ್ನು ಚೆನ್ನಾಗಿ ತಿಳಿದು, ಪ್ರತ್ಯುತ್ತರವನ್ನು ಹೇಳು ಎಂದನು. ಆ ಮಾತಿಗೆ ಆ ವನಿತೆಯು : —

ಎಲೈದೊರೆಯೆ ! ನಿಮ್ಮ ತಂದೆಯಾದ ರಾಮನು ತನ್ನ ದಿವ್ಯ ದೇಹ

ವನ್ನು ಪ್ರವೇಶಿಸಲಿಕ್ಕೆ ತೆರಳುವಾಗ ಪುರಜನರನ್ನೆಲ್ಲ ಕರದೊಯ್ದು ನಷ್ಟೆ ? ಅದರಿಂದಲೇ ಅನಾಥಳೆನಿಸಿ, ದೋಷಲೇಶವಿಲ್ಲದ ಆ ಅಯೋಧ್ಯಾಭಿಮಾನಿದೇವತೆಯೇ ನಾನಾಗಿರುವೆನು. ಈ ನಾನು - ಕುಬೇರನ ಅಲಕಾನಗರವನ್ನೂ, ಇಂದ್ರನ ಅಮರಾವತಿಯನ್ನೂ ತೊರೆದು, ಬಳ್ಳಿಯರಾಜನುಳ್ಳ ದೇಶನೆಂಬ ಹೆಸರುವಾಸಿಯಿಂದ ಉತ್ಸವಗಳ ವೈಭವವನ್ನು ಪಡೆದು, ಸೂರ್ಯವಂಶದವನೂ, ಶಕ್ತಿಪರಿಪೂರ್ಣನೂ ಆಗಿರುವ ನೀನು ಇದ್ದಾಗ್ಯೂ ಈ ವಿಧವಾದ ಅವಸ್ಥೆಯನ್ನು ಪಡೆದು ಇದ್ದೇನೆ. ನನ್ನ ಮನೆಯಾದ ಪಟ್ಟಣವು - ಆಳುವದೊರೆಯಿಲ್ಲದುದರಿಂದ - ಬಿರಿದು, ಕಳಲಿ, ಉರುಳಲಿಕ್ಕೆ ಬಂದ ನೂರಾರು ಉಪ್ಪರಿಗೆಗಳನ್ನೊಳಗೊಂಡಿರುವುದೂ, ಸಡಿಲವಾಗಿ, ಬಗ್ಗಿ, ಓಲಿರುವ ಕೋಟೆಗೋಡೆಗಳುಳ್ಳುದೂ ಆಗಿ, ಮುಳುಗಲಿಕ್ಕೆಬಂದ ಸೂರ್ಯನುಳ್ಳುದೂ, ಬಿರುಗಾಳಿಯಿಂದ ಒಡೆದು ಚೆಮರುತ್ತಿರುವ ಮೋಡಗಳುಳ್ಳುದೂ ಆಗಿರುವ ಸಂಜೆಯ ಹೊತ್ತನ್ನು ಹೋಲುತಲಿದೆ. ನಟ್ಟಿರುಳುಗಳಲ್ಲಿ ಯಾಮಿಕರೆಂಬ ಕಾವಲುಗಾರರ ಸಂಚಾರಕ್ಕೆ ಯೋಗ್ಯಗಳಾಗಿದ್ದ ರಾಜಮಾರ್ಗಗಳು, ಕೊಳ್ಳಿಗಳಂತೆ ಹೊಳೆಯುತಲಿರುವ ನಾಲಿಗೆಗಳನ್ನು ನೀಡಿ. ಕೂಗುತ್ತ, ತಿಂಡಿಗಾಗಿ ಮಾಂಸವನ್ನು ಹುಡುಕಿಕೊಂಡು ಓಡಿಬರುವ ಹೆಣ್ಣುನರಿಗಳ ತಿರುಗಾಟಕ್ಕೆ ಅಣಿಯಾಗಿವೆ. ಯಾವಕಟ್ಟಣವಲ್ಲಿನ ಕೊಳಗಳ ನೀರು - ನೀರಾಟಗಳ ಸಮಯದಲ್ಲಿ ಪುರಸುಂದರಿಯರ ಕರಗಳಿಂದ ಕಲಕಲ್ಪಟ್ಟುದಾಗಿ, ಮನೋಹರವಾದ ಮೃದಂಗ ನಾದವನ್ನು ಅನುಸರಿಸುತಲಿದ್ದಿತೋ, ಅಂತಹಜಲವು - ಈಗ ಕಾಡುಕೋಣಗಳಿಂದ ಕಲಕಲ್ಪಡುತ್ತಾ ಗಟ್ಟಿಗೆ ಗೋಳಿಡುವಂತಿದೆ. ಆಸರೆಯಾಗಿದ್ದ ಮರ ಗಿಡಗಳ ಕೊನೆಗಳೆಲ್ಲ ಹಾಳಾದುದರಿಂದಲೂ, ಮದ್ದಳೆಗಳ ಸದ್ದಿಲ್ಲದೆ ಕುಣಿತವು ತಪ್ಪಿದುದರಿಂದಲೂ, ಹೂದೋಟಗಳ ಆಟದ, ಊರನವಿಲುಗಳು - ಹಾರಿಬರುವಾಗ ಕಾಡ್ಗಿಚ್ಚಿಗೆಸಿಲುಕಿ, ರೆಕ್ಕೆ ಪುಕ್ಕಗಳೆಲ್ಲ. ಸೀದುಹೋಗಲು ಕಾಡುನವಿಲುಗಳಾಗುತಲಿವೆ. ಮತ್ತು - ಯಾವ ನನ್ನ ಹೊಳಲ ಬಾಗಿಲಿನಲ್ಲಿನ ಸೋಪಾನಗಳಲ್ಲಿ ನಗರನಾರಿಯರು - ಅರಗಿನರಸದಿಂದ ಅಂದವಾಗಿ ಅಲಂಕರಿಸಿಕೊಂಡಿದ್ದ ಹೆಜ್ಜೆಗಳನ್ನಿರಿ ನಡೆಯುತಲಿದ್ದರೋ, ಅಂತಹ ಸೋಪಾ

ಗಳಲ್ಲಿ - ಈಗ, ಹುಲಿಗಳು ಹುಲ್ಲೆಮರಿಗಳನ್ನಿರಿ ಕೊಂದು ಅವುಗಳ ಮೈಗ
ಳಿಂದ ಸೋರಿದ ರಕ್ತದಿಂದ ನೆನದ ತಮ್ಮ ಅಡಿಗಳನ್ನಿಟ್ಟು ಸಂಚರಿಸುತಲಿವೆ.
ಇದಲ್ಲದೆ - ಯಾವ ನನ್ನಪುರದ ಅರಮನೆಯ ಗೋಡೆಗಳಮೇಲೆ ಆನೆಗಳು
ತಾವರೆಯ ಕೊಳಗಳಿಗಿಳಿಯುತ್ತಿರುವಹಾಗೂ, ಆಲೇಖ್ಯಗಳಲ್ಲಿನ ಹೆಣ್ಣಾನೆ
ಗಳು ಕಿತ್ತು ಮುರಿದುಕೊಡುವ ತಾವರೆಯ ದಂಟುಗಳನ್ನು ಸೊಂಡಿಲಿನಿಂದ
ಹಿಡಿಯುತ್ತಿರುವಹಾಗೂ, ಚಿತ್ರಿಸಲ್ಪಟ್ಟಿದ್ದುವೋ, ಅವುಗಳೀಗ, ಪ್ರತ್ಯಕ್ಷ
ವಾಗಿ ಬಂದು ರೋಷಗೊಂಡ ಸಿಂಹಗಳ ನಖಗಳೆಂಬ ಅಂಕುಶಗಳ ಪೆಟ್ಟಿ
ನಿಂದ ಕುಂಬಸ್ಥಲಗಳನ್ನೊಡೆದುಕೊಳ್ಳುತಲಿವೆ. ಆ ರಾಜಭವನದ ಸ್ತಂಭಗ
ಳಲ್ಲಿ ಕೆತ್ತಿರುವ ಹೆಣ್ಣು ಗೊಂಬೆಗಳು -ಮೇಲೆಹಚ್ಚಿದ್ದ ಬಣ್ಣಗಳೆಲ್ಲಾ ಹಾರಿ
ಹೋಗಿ ಮಲಿನಗಳಾಗಿ, ಈಗ ತಮ್ಮಮೇಲೆ ಹರಿದಾಡುತಲಿರುವ ಹಾವು
ಗಳು ಬಿಟ್ಟ ಪರೆಗಳೆಂಬ ಪಟ್ಟುಬಟ್ಟೆಗಳನ್ನು ಮೇಲುಹೊದಿಕೆಗಳನ್ನಾಗಿ
ಮಾಡಿಕೊಂಡಿವೆ. ಉಪ್ಪರಿಗೆಗಳಮೇಲೆ ಬಳಿದಿದ್ದ ಸುಣ್ಣದ ಹೊಳಪೆಲ್ಲ ಕಾಲ
ವಶದಿಂದ ತೊಡೆದುಹೋಗಿ, ಅಲ್ಲಲ್ಲಿ ಗರಿಕೆಯಹುಲ್ಲು ಬೆಳೆದು, ಮುತ್ತುಗಳ
ಹಾರದಂತಿರುವ ಚಾಂದ್ರಕಿರಣಗಳು ಪೂರ್ವದಂತೆಯೇ ಈಗಲೂ ಬೀಳುತ್ತಿ
ದ್ದರೂ ಪ್ರತಿಫಲಿಸುತಲಿಲ್ಲ. ಮತ್ತು - ಯಾವನನ್ನ ಪುರೋದ್ಯಾನಗಳಲ್ಲಿ
ಪುರಸುಂದರಿಯರು - ಎಳೆಬಳ್ಳಿಗಳನ್ನು ಸದಯರಾಗಿ ಮೆಲ್ಲಗೆ ಬಗ್ಗಿಸಿ,
ಹೂಗಳನ್ನು ಬಿಡಿಸುತಲಿದ್ದರೋ, ಅಂತಹ ಕೋಮಲಲತೆಗಳನ್ನೀಗ ಕಪಿ
ಗಳೂ, ಕಾಡು ಬೇಡರೂ ಮುರಿದು ಹಾಳುಮಾಡುತಲಿದಾರೆ. ಇರುಳ
ಲ್ಲಿ ದೀವಿಗೆಯ ಬೆಳಕಿಲ್ಲದಿರುವುದರಿಂದಲೂ, ಹಗಲು ಭಾಮಿನಿಯರ
ಮುಖಕಾಂತಿಯು ಪಸರಿಸದಿರುವುದರಿಂದಲೂ, ಹೊಗೆಯು ಹೊರಡದಿರು
ವುದರಿಂದಲೂ, ಗವಾಕ್ಷಗಳು - ಜೇಡರ ಹುಳಗಳ ಗೂಡುಗಳ ದಾರದಿಂದ
ಮುಚ್ಚಲ್ಪಟ್ಟಿವೆ. ಅರುಗಿನಲ್ಲಿನ ಮಳಲು ದೈಲಿನಲ್ಲಿ ಪೂಜಾಸಾಮಗ್ರಿಗಳ
ಸ್ಥದೆಯೂ, ಸೀಗೆಯಕಾಯಿ ಪುಡಿಯೇಮೊದಲಾದ ಚೂರ್ಣಗಳ ಸಂಬಂಧ
ವಿಲ್ಲದೆಯೂ, ದಡದಲ್ಲಿ ಬರಿದಾಗಿರುವ ಲತಾಗೃಹಗಳುಳ್ಳುವಾಗಿಯೂ, ಸ್ನಾನ
ಮಾಡತಕ್ಕವರಿಲ್ಲದೆಯೂ ಇರುವ ಸರಯೂ ನದೀಜಲಗಳನ್ನು ನೋಡಿ
ನಾನು ಬಹಳ ಸಂಕಟಪಡುತಲಿದೇನೆ.

ಆದಕಾರಣ - ಎಲೈಕುವಲಯಪ್ರಿಯನೆ ! ನಿಮ್ಮತಂದೆಯಾದ

ರಾಮನು ನಿಮಿತ್ತವಶದಿಂದ ಮಾನುಷ ದೇಹವನ್ನು ಬಿಟ್ಟು, ಪರಮಾತ್ಮ ದೇಹವನ್ನು ಹೊಂದಿದ ಹಾಗೆ, ಈಕುಶಾವತಿಯನ್ನು ಬಿಟ್ಟು, ಕುಲರಾಜಧಾನಿ ಯೆನಿಸಿರುವ ಅಯೋಧ್ಯೆಯಾದ ನನ್ನನ್ನು ಹೊಂದಲು ತಕ್ಕವನಾಗಿದ್ದೀಯೆ ಎಂದಳು. ರಘುಕುಲಾಗ್ರಗಣ್ಯ ನಾದ ಕುಶನು - ಆಕೆಯಯಾಚನೆಯನ್ನು ಸಂತೋಷದಿಂದ ಹಾಗೆಯೇ ಆಗಲೆಂದು ಒಪ್ಪಿಕೊಂಡನು. ಮೂರ್ತಿ ಮತಿಯಾಗಿದ್ದ ಅಯೋಧ್ಯೆಯೂ ಪ್ರಸನ್ನಮುಖಳಾಗಿ ಮಾನುಷ ದೇಹವನ್ನು ಬಿಟ್ಟು, ದೈವರೂಪದಿಂದ ಅದೃಶ್ಯಳಾದಳು.

ಬೆಳಗಾಯಿತು, ಕುಶನರಪಾಲನು ಎಂದಿನಂತೆ ಸಭೆಗೈತಂದು ಧರ್ಮಾಸನದಲಿ ಕುಳಿತನು, ಸಭಾಸದರೆಲ್ಲ ನೆರದಿದ್ದರು. ಆಗ ಅಲ್ಲಿದ್ದ ದ್ವಿಜವರರಿಗೆಲ್ಲ ರಾತ್ರಿನಡೆದ ಅದ್ಭುತವೃತ್ತಾಂತವನ್ನುಅರುಹಿದನು. ಅವರು ಕುಲರಾಜಧಾನಿಯು ಇದಿರಿಗೆಬಂದು ಪತಿಯಾಗುವಂತೆ ವರಿಸಿದುದನ್ನು ಕೇಳಿ ಬಹಳವಾಗ ಅಭಿನಂದಿಸಿದರು.

ಬಳಿಕ ಕುಶನೃಪತಿಯು - ಕುಶಾವತಿಯನ್ನು ಶ್ರೋತ್ರಿಯರಾದ ಬ್ರಾಹ್ಮಣರಿಗಿತ್ತು, ಪ್ರಯಾಣಕ್ಕೆ ಅನುಕೂಲವಾದ ದಿವಸದಲ್ಲಿ ಅಂತಃಪುರಸ್ತ್ರೀಜನರಿಂದ ಸಹಿತನಾಗಿ, ಮೇಘಸಮುದಾಯಗಳಿಂದ ವಾಯುವು ಹೇಗೋಹಾಗೆ, ಸೈನ್ಯಗಳಿಂದೊಡಗೂಡಿ, ಅಯೋಧ್ಯಾಭಿಮುಖನಾಗಿ ಹೊಹೊರಟನು. ಆಗ - ಧ್ವಜಪಙ್ತಿಯೆಂಬ ಉಪವನ ಗಳುಳ್ಳುದೂ, ಮಹಾಗಜಗಳೆಂಬಆಟದ ಬೆಟ್ಟಗಳುಳ್ಳದೂ, ರಥಗಳೆಂಬಉತ್ತಮಗೃಹಗಳುಳ್ಳುದಾಆಗಿರುವ, ಸೇನೆಯು ಆ ರಾಜನನ್ನು ಹಿಂಬಾಲಿಸಿ ನಡೆದು ಬರುತಲಿರುವ ರಾಜಧಾನಿಯಂತೆ ಕಂಗೊಳಿಸುತಲಿದ್ದಿತು. ಮತ್ತು - ಬೆಳ್ಗೊಡೆಯನ್ನುಳ್ಳ ಆ ಪ್ರೊಢವಿಯೊಡೆಯನಾಣತಿಯಿಂದ ಪೊರಮಡುತಲಿರುವ ಪಡೆಯು - ಉಡುರಾಜನಿಂದ ತಡಿಗೈದಿಸಲ್ಪಡುವ ಕಡಲಿನಂತೆ ಕಾಣಬರುತಲಿದ್ದಿತು. ಇಂತು ಪಯಣವನ್ನು ಬೆಳಸುತಲಿರುವ ಸೇನೆಯತುಳಿತದ ತೊಂದರೆಯನ್ನು ತಾಳಲಾರದೆ ವಸುಂಧರೆಯು ಎರಡನೆಯ ವಿಷ್ಣುಪದವನ್ನು ಕುರಿತು ಏರುತಿದ್ದಿತು. ಮತ್ತು ಆ ದಳವು - ಕುಶಾವತಿಯನ್ನು ಬಿಟ್ಟು ಹೊರಡುತಲಿರುವಲ್ಲಿಯೂ, ನಡುವೆ ನಡೆನು ಬರುವಲ್ಲಿಯೂ ಮುಂದೆ ಇಳಿಯುತಲಿವಲ್ಲಿಯೂ, ಎಲ್ಲೆಲ್ಲಿ ನೋಡಿದರೂ ನೋಟಕರಿಗೆ ಪರಿಪೂರ್ಣವಾಗಿರುವಂತೆ

ತೋರುತಲಿದ್ದಿತು. ನಾಯಕನಾದ ಕುಶನ ಆ ವಾಹಿನಿಯಲ್ಲಿ ಮುಂದೆ ಬರುತಲಿರುವ ಮದಗಜಗಳವೃಯಿಂದ ಹರಿವ ಮದಜಲಧಾರೆಯಿಂದ ನನೆದ ನೆಲವೆಲ್ಲ ಕೆಸರಾಗುತಲಿದ್ದಿತು. ಹಾಗೆಯೇ ಹಿಂದೆಬರುವ ಕುದುರೆಗಳಖುರಪುಟಗಳ ತುಳತದಿಂದ ನಿಮಿಷಮಾತ್ರದಲ್ಲಿ ಧೂಳಿಯಾಗುತಲೂ ಇದ್ದಿತು. ಇಂತು ಹರಿದು ಬರುತಲಿರುವ ಆ ಸೇನೆಯು - ವಿಂಧ್ಯಪರ್ವತದ ತಪ್ಪಲಿನಲ್ಲಿ ಮಾರ್ಗದಾರಿಯನ್ನು ಹುಡುಕುತ ಕಷಲುಕವಲಾಗಿ ಒಡೆದ, ರೇವಾನದಿಯಂತೆ ಕೋಲಾಹಲ ಧ್ವನಿಯುಳ್ಳುದಾಗಿ, ಗವಿಗಳಿಂದ ಪ್ರತಿಧ್ವನಿಯನ್ನು ಹೊರಡಿಸುತಲಿದ್ದಿತು. ಕಾವಿಮೊದಲಾದ ಕಲ್ಲುಗಳಮೇಲೆ ಹರಿವುಗರಿಂದ ಕೆಂಪಾದ ತೇರಿನಗಾಲಿಯುಪಟ್ಟಿಗಳುಳ್ಳುದೂ, ಪಯಣದ ಕಲಕಲದಿಂದ ಮಿಶ್ರವಾದವಾದ್ಯಧ್ವನಿಯುಳ್ಳುದೂ ಆಗಿರುವ ದಂಡಿನಿಂದೊಡಗೂಡಿದ ಕುಶನು -ಅಲ್ಲಲ್ಲಿ ಬೇಡರೊಪ್ಪಿಸುವ ಹಣ್ಣುಹಂಪಲು ಮೊದಲಾದ ಉಪಹಾರಗಳನ್ನು ನೋಡಿ ಸಂತೋಷಿಸುತ್ತಾ ತೆರಳಿದನು. ಆ ವಿಂಧ್ಯಪರ್ವತದ ಹತ್ತಿರದಲ್ಲಿನ ಹೊಳೆಯಲ್ಲಿ ಆನೆಗಳು ಸೇತುವೆಯಾಗಿ ನಿಲ್ಲಲು, ಪಶ್ಚಿಮವಾಹಿನಿಯಾದ ಗಂಗೆಯನ್ನು ದಾಟುತಲಿದ್ದ ಕುಶನಿಗೆ, ಆಗಸಕ್ಕೆಹಾರುತ ಹರಡಿ ಅಲುಗುತಲಿರುವ ರೆಕ್ಕೆಗಳನ್ನೊಳಗೊಂಡಿರುವ ಅಂಚೆಗಳು ಪ್ರಯತ್ನವಿಲ್ಲದೆಯೇ ಅಣಿಯಾದ ಚಾಮರಗಳಾದವು. ಆಗ ಕುಶನು - ಹಿಂದೆಕಪಿಲಮುನಿಯ ಕೋಪಾಗ್ನಿಯಿಂದ ಬೂದಿಯಾಗಿ ಉಳಿದ ದೇಹಗಳುಳ್ಳವರೂ, ತನ್ನಪೂರ್ವಪುರುಷರೂ ಆದ ಸಗರಪುತ್ರರ ಸ್ವರ್ಗಪ್ರಾಪ್ತಿಗೆ ಮೂಲಕಾರಣವಾದುದೂ, ನಾವೆಗಳಸಂಚಾರದಿಂದ ಚಂಚಲವಾದುದೂ ಆಗಿರುವ ಭಾಗೀರಥೀಜಲಕ್ಕೆ ಅಭಿವಂದಿಸಿದನು. ಇಂತು ಕುಶಮಹಾರಾಜನು - ಕೆಲವುದಿವಸಗಳವರೆಗೂ ಹಾದಿಯನ್ನು ಕಳೆದು, ಸರಯೂತೀರವನ್ನು ಸೇರಿ, ಅಲ್ಲಿ ತನ್ನಹಿರಿಯರಿಂದ ವಿಸ್ತರಿಸಲ್ಪಟ್ಟ, ವೇದಿಗಳಲ್ಲಿ ನೆಲೆಗೊಂಡಿರುವ ನೂರಾರು ಯೂಪಸ್ತಂಭಗಳನ್ನು ಕಂಡನು, ಹೂತಿರುವ ಮರಗಳಮೇಲೆ ಹಾಯ್ದು, ತಂಪಾದ ಸರಯೂತರಂಗಗಳಮೇಲೆನುಗ್ಗಿ, ಹೊರಟುಬಂದ ಕುಲರಾಜಧಾನಿಯ ಉದ್ಯಾನವಾಯುವು - ಕುಶಮಹಾರಾಜನನ್ನು ಇದಿರ್ಗೊಂಡಿತು.

ಆಬಳಿಕ-ಹಗೆಗಳೆದೆಯಲ್ಲಿ ಅಲಗನ್ನುನಡಕುಕ್ಕವನೂ, ರಘುಕುಲಲಲಾ

ಮನೂ, ಪ್ರಜಾಪ್ರಿಯನೂ ಆಗಿರುವ ಕುಶನರಪಾಲನು - ಚಲಿಸುತಲಿರುವ ಧ್ವಜಪಟಗಳನ್ನೊಳಗೊಂಡ ಸೈನ್ಯವನ್ನು ಪುರದ ಹೊರವಳೆಯದಲ್ಲಿ ಇಳಿಸಿದನು. ಆ ಹಿಂದೆ ಕುಶರಾಜನಾಣತಿಯನಾಂತು, ಬಹುಮಂದಿ ಕೈವಾಡಗಾರರು - ಅಣಿಯಾಗಿದ್ದ ಸಕಲಸಲಕರಣೆಗಳಿಂದ, ಅದುವರೆಗೆ ಹಾಳಾಗಿದ್ದ ಅಯೋಧ್ಯಾನಗರವನ್ನು ಮೋಡಗಳು ಮಳೆಗರೆವುದರ ಮೂಲಕ ಬೇಸಗೆಯ ಬೇಗೆಯಿಂದ ಬೆಂದಿದ್ದ ಭೂಮಿಯನ್ನು ಹೇಗೋ ಹಾಗೆ ಹೊಸದಾಗುವಂತೆ ಅಲಂಕರಿಸಿದರು. ತರುವಾಯ ಆ ರಘುವೀರನು - ಪ್ರಶಸ್ತಗಳಾದ ದೇವಾಲಯಗಳೊಳಗೆ ಉಪವಾಸವೇ ಮುಂತಾದ ನೇಮಗಳಿಂದೊಡಗೂಡಿರುವ ವಾಸ್ತುವಿದರಮೂಲಕ ಬಗೆಬಗೆಯಾದ ಪೂಜಾಸಾಮಗ್ರಿಗಳಿಂದ ಅರ್ಚನೆಯಕ್ರಮವನ್ನು ನೆರವೇರಿಸಿದನು. ಆಮೇಲೆ ಕಾಮುಕನು ಕಾಮಿನಿಯ ಮನವನ್ನು ಹೊಗುವಂತೆ ರಾಜಸದನವನ್ನು ಪ್ರವೇಶಿಸಿ, ತದನಂತರದಲ್ಲಿ ಮಂತ್ರಿಗಳೇ ಮುಂತಾದ ಪರಿಜನರಿಗೆಲ್ಲ ಅವರವರ ಯೋಗ್ಯತಾನುಸಾರವಾದ ಭವನಗಳನ್ನು ಸಜ್ಜುಗೊಳಿಸಿ ಸಂಭಾವಿಸಿದನು. ಆಗಲಾ ದಿವ್ಯರಾಜಧಾನಿಯು- ಅಂದವಾಗಿ ಅಣಿಯಾದ ದವಸಧಾನ್ಯಗಳಿಂದೊಡಗೂಡಿದ ಅಂಗಡಿಬೀದಿಗಳಿಂದಲೂ, ಅಶ್ವಶಾಲೆಗನ್ನಾಶ್ರಯಿಸಿರುವ ತುರಂಗಮಗಳಿಂದಲೂ, ಗಜಶಾಲೆಗಳ ಕಂಬಗಳಿಗೆ ಕಟ್ಟಿರುವ ಕರಿಗಳಿಂದಲೂ, ಸರ್ವಾಂಗಗಳಲ್ಲಿಯೂ ಅಲಂಕರಿಸಿಕೊಂಡಿರುವ ಸುಮಂಗಲಿಯಂತೆ ಸಂಶೋಭಿಸುತಲಿದ್ದಿತು. ಇಂತು ಸರ್ವಸಂಪತ್ಸಮೃದ್ಧಿಯಿಂದ ರಘುಕುಲದರಸರ ನಗರಿಯು ಪೂರ್ವದಂತೆ ರಾರಾಜಿಸುತಲಿರಲು, ಮೈಥಿಲೀಕುಮಾರನು - ಅಮರಾಧಿಪತಿಯನ್ನೂ, ಅಲಕೇಶ್ವರನನ್ನೂ ಗಣನೆಮಾಡದಿದ್ದನು.

ಹೀಗಿರುವಲ್ಲಿ - ಮುಕ್ತಾಮಣಿಮಯವಾದ ಉತ್ತರೀಯವನ್ನು ಹೊದೆದು, ವಿಶೇಷವಾಗಿ ಬೆಳ್ಳಗಿರುತ, ಎದೆಯಲ್ಲಿ ಜೋಲಾಡುತಲಿರುವ ಹಾರಗಳನ್ನೊಳಗೊಂಡು, ನಿಟ್ಟುಸಿರಿನ ಮಾತ್ರದಿಂದ ಅಲುಗುವಷ್ಟು ನವುರಾದ ಬಟ್ಟೆಯನ್ನುಟ್ಟಿರುವ ಕುಶನಿಗೆ ನಾಯಿಕೆಯವೇಷವನ್ನು ಉಪದೇಶಿಸಲೆಳಸಿರುವುದೋ ಎಂಬಂತೆ ಬೇಸಗೆಯು ಬಂದಿತು. ಅಗಸ್ತ್ಯಮುನಿಗಾಸರೆಯಾದ ದಕ್ಷಿಣವನ್ನು ಬಿಟ್ಟು, ರವಿಯು ತನ್ನ ಕಡೆಗೆ ಬರತೊಡಗಲು

ಉತ್ತರದಿಶೆಯು - ಹಿಮವತ್ಸಂಬಂಧದಿಂದುಂಟಾದ ಹಿಮವೃಷ್ಟಿಯೆಂಬ ಆನಂದಬಾಷ್ಪವನ್ನು ಕರೆಯುತಲಿದ್ದಿತು, ಆಗ - ಹೇರಳವಾದ ತಾಪವ ನ್ನೊಳಗೊಂಡಿರುವದಿವಸ, ವಿಶೇಷವಾಗಿ ಕೃಶಿಸಿರುವರಾತ್ರಿ ಎಂಬೀ ಎರಡೂ ಪ್ರಣಯ ಕಲಹವೇಮೊದಲಾದ ವಿರೋಧಾಚರಣೆಯಿಂದ ಅಗಲಿ. ಅನುತಾಪ ಪಡುತಲಿರುವ ಗಂಡಹೆಂಡಿರಂತೆ ಇರುತ್ತಿದ್ದುವು. ಪುಣ್ಯವಂತರ ಮನೆಗಳ ಅಂಗಳಗಳಲ್ಲಿನ ಕೊಳಗಳೊಳಗೆ ನೀರು - ಬೀಗಿದ ಪಾವಸೆಗಳನ್ನು ಮಾತ್ರವೇ ಸೋಪಾನಗಳಮೇಲೆ ಉಳಸುತ್ತಾ, ದಿನದಿನಕ್ಕೂ ಕೆಳಕ್ಕೆ ಇಳದು, ನೀರಾಟಕ್ಕೆ ತಕ್ಕುದೆನಿಸುವಹಾಗೆ ನಾರಿಯರ ಟೊಂಕದುದ್ದದ ಷ್ಟಾಗಿ ನಿಲ್ಲುತಬಂದಿತು. ತೋಟಗಳೊಳಗೆ ಸಂಜೆಯಹೊತ್ತಿನಲ್ಲಿ ಅರಳುತ ಸುವಾಸನೆಯನ್ನು ಹರಡುತಲಿರುವ ಮಲ್ಲಿಗೆಯ ಮೊಗ್ಗುಗಳಮೇಲೆ, ಕಾಲ ನ್ನೂರಿಯೂ ಊರದಹಾಗೆ ಹಾರಾಡುತಲಿರುವ ದುಂಬಿಗಳು - ಬಾಯಿಂದ ಲೆಕ್ಕವನ್ನು ಹೇಳಿ, ಕಾಲಿನಿಂದ ಎಣಿಸುತಲಿರುವುವೋ ಎಂಬಂತೆ ಕಾಣಬ ರುತ್ತಿದ್ದುವು. ನಾರಿಯರು ಕಿವಿಗಳ ಸಂದಿನಲ್ಲಿ ಸಿಂಗರಿಸಿಕೊಂಡಿರುವ ಬೆಟ್ಟ ಮಲ್ಲಿಗೆಯಹೂಗಳು - ಉದಿರುವಹಾಗೆ ಬಾಗಿದ್ದರೂ ಕಪೋಲಗಳ ಲ್ಲಿನ ಬೆವರು ಹನಿಗಳಲ್ಲಿ ರೇಕುಗಳು ಮೆತ್ತಿಕೊಳ್ಳುತಲಿದ್ದುದರಿಂದ ತಟ್ಟನೆ ಕೆಳಕ್ಕೆ ಬೀಳುತಲಿರಲಿಲ್ಲ. ಭಾಗ್ಯವಂತರು - ತಮ್ಮ ದಿವ್ಯ ಭವನಗಳೊ ಳಗೆ ಇಡಿಸಿರುವ ಜಲಧಾರಾ ಯಂತ್ರಗಳಮೂಲಕ ಶೀತಲಚಂದನ ರಸಗ ಳನ್ನು ಚೆಲ್ಲಿಸಿ, ಮಣಿಮಯವಾದ ಹಲಗೆ ಗಲ್ಲುಗಳನ್ನು ತೊಳೆಯಿಸಿ, ಅವು ಗಳಮೇಲೆ ಪವಳಸುತ್ತಾ, ಬಿಸಿಲಿನ ಜಳವನ್ನು ಪರಿಹರಿಸಿಕೊಂಡು ತಂಪು ಮಾಡಿಕೊಳ್ಳುತಲಿದ್ದರು. ಪುರ ಸುಂದರಿಯರು - ಸಂಜೆಯಹೊತ್ತಿನಲ್ಲಿ ಸುಖಮಜ್ಜನಮಂಗೈದು ತಮ್ಮ ಅಂದವಾದ ಕೂದಲಿಗೆ ಪರಿಮಳ ಧೂಪ ವನ್ನು ಕೊಟ್ಟು, ಗಮಗಮಿಸುವ ಮಲ್ಲಿಗೆಯ ಮೊಗ್ಗುಗಳಿಂದ ಅಲಂಕರಿಸಿ ಕೊಳ್ಳುವರು. ರಜದಿಂದ ತುಂಬಿ, ಹೊಂಬಣ್ಣವಾಗಿಯೂ, ನೀಳವಾಗಿಯೂ ಇರುವ ಅರ್ಜುನತರುಕುಸುಮಮಂಜರಿಯು - ದೇಹವನ್ನೇ ಸುಟ್ಟು ಬಿಟ್ಟರೂ ಶಾಂತನಾಗದೆ ಮೃತ್ಯುಂಜಯನು ಕತ್ತರಿಸಿದ ಕಾಮನ ಬಿಲ್ಲಿನ ಹೆದೆಯಂತೆ ಕಂಗೊಳಿಸುತಲಿದ್ದಿತು. ಮನೋಹರವಾಗಿರುವ ಮಾವಿನ ಗಿಡಗಳ ಚಿಗುರು, ಕಬ್ಬಿನಹಾಲಿನಿಂದ ಮಾಡಿದ ಮದ್ಯರಸ, ಗಮಗಮಿಸುವ

ಅಂಥವಾದ ಪಾದರಿಯಹೂವು, ಈ ಮೊದಲಾದವುಗಳಿಂದ ಆ ಗ್ರೀಷ್ಮಕಾಲವು - ರಸಿಕಜನರ ತಾಪವೇಮೊದಲಾದ ಎಲ್ಲ ದೋಷಗಳನ್ನೂ ಅಡಗಿಸಿಬಿಟ್ಟಿತು. ಅಭ್ಯುದಯದಲ್ಲಿರುವ ತಾರಾಪತಿ, ನರಪತಿಎಂಬೀ ಇಬ್ಬರುಮಾತ್ರವೇ ಆ ಕಠಿನತರವಾದ ಗ್ರೀಷ್ಮರ್ತುವಿನಲ್ಲಿ ಜನರಿಗೆ ಪಾದಸೇವೆಯಿಂದ ವಿಶೇಷವಾಗಿ ತಾಪಪರಿಹಾರಕರಾಗಿರುತ್ತಿದ್ದರು.

ಆ ಬಳಿಕ - ಅಲುಗುತಲಿರುವ ಅಲೆಗಳಮೇಲೆ ತೇಲಾಡುವ ಅಂಚೆಗಳುಳ್ಳುದೂ, ತೀರದಲ್ಲಿನ ತರುಲತೆಗಳ ಹೂಗಳನ್ನಾಂತುದೂ ಆಗಿರುವ ಸರಯೂನದಿಯ ಜಲದಲ್ಲಿ, ಹೆಂಗಳೊಡನೆ ಬೇಸಗೆಯಲ್ಲಿ ಸುಖಕರವೆನಿಸಿದ ನೀರಾಟವನ್ನಾಡ ಬೇಕೆಂದು ಆ ಕುಶ ಭೂಪತಿಗೆ ಬಯಕೆಯುಂಟಾಯಿತು, ಅದರಿಂದಲೇ ವಿಷ್ಣುವಿನಂತೆಸೆವ ಕುಶನು - ತೀರಭೂಮಿಯಲ್ಲಿ ಗೂಡಾರಗಳನ್ನು ಅಣಿಮಾಡಿಸಿ, ಜಾಲಿಕರಿಂದ ಮೊಸಳೆಗಳಿಲ್ಲದಂತೆ ಅನುಗೊಳಿಸಿ, ಸಂಪತ್ಸಮೃದ್ಧಿಗನುಗುಣವಾಗಿ ಜಲಕ್ರೀಡಾನಿರತನಾಗಿದ್ದನು. ಆಗಲಾ ಸರಯೂ ನದಿಯು - ತೀರಭೂಮಿಯಿಂದ ಸೋಪಾನ ಮಾರ್ಗವಾಗಿ ಇಳಿಯುತಲಿರುವ ಅಂಗನೆಯರ ಒಯ್ಯಾರದ ಒತ್ತು ನಡಗೆಯಲ್ಲಿ ಒಬ್ಬೊಬ್ಬರ ಬಾಪುರಿಗಳು ತಗಲುವ ಸದ್ದಿನಿಂದಲೂ, ಬೆಡಗಿನಿಂದಿಡುವ ಅಡಿಯ ಕಡಗದ ಶಬ್ದದಿಂದಲೂ, ಅಂಜಿದಂಚೆಗಳುಳ್ಳುದಾಯಿತು. ಕುಶನು ತೆಪ್ಪದ ಮೇಲೆ ಕುಳಿತು, ಸರಯೂ ಜಲದಲ್ಲಿ ನಿಂತು ಒಬ್ಬರ ಮೇಲೊಬ್ಬರು ನೀರನ್ನು ಚೆಲ್ಲುತಲಿರುವ ರಮಣಿಯರನ್ನು ವಿಶೇಷಾಭಿಲಾಷೆಯಿಂದ ನೋಡುತ್ತಾ, ತನ್ನ ಪಕ್ಕದಲ್ಲಿ ಚಾಮರವನ್ನು ಹಿಡಿದು ನಿಂತಿರುವ ಕಿರಾತಿಯನ್ನು ಕುರಿತು ಇಂತೆಂದನು—

ಎಲೆ ಕಿರಾತಿ ! ಇತ್ತನೋಡು : - ನೂರಾರು ಮಂದಿ ನಮ್ಮ ಅಂತಃಪುರಾಂಗನೆಯರು ಒಳಹೊಕ್ಕು, ಕಲಕುತಲಿರುವುದರಿಂದ ಅವರ ಅಂಗರಾಗವೆಲ್ಲ ಕದಡಿಹೋಗಿ, ಹೊಳೆಯು - ಬಗೆಬಗೆಯ ಬಣ್ಣವನ್ನಾಂತು, ಮೇಘಗಳಿಂದೊಡಗೂಡಿರುವ ಸಂಧ್ಯೋದಯವನ್ನುಹೋಲುತಲಿದೆ, ನಮ್ಮ ಈ ನಾವೆಯು ಅಲ್ಲಾಟದಿಂದ ಚಲಿಸಿ ಮುಂಚಕ್ಕೆ ಹಾಯುತಲಿರುವ ನೀರು-ಈಅಂಗನೆಯರ ಕಣ್ಣುಗಳಿಗೆ ತಗಲಿ, ಅಲ್ಲಿನ ಕಾಟಿಕೆಯನ್ನೆಲ್ಲ ಅಪಹರಿಸಿ, ಅದಕ್ಕೆ ಬದಲಾಗಿ ಅವರ ನೇತ್ರಗಳಿಗೆ ಮದರಾಗ ಶೋಭೆಯನ್ನುಂಟು

ಮಾಡುತಲಿವೆ ಈಸುಮಂಗಲಿಯರ ನೀರಾಟದಲ್ಲಿ - ಇವರ ಕಿವಿಗಳಿಗಳಿಗ ಲಂಕಾರವಾಗಿದ್ದ, ಅಲ್ಲಿಂದುದರಿದ ಮಲ್ಲಿಗೆಯ ಹೂಗಳು - ಅಲ್ಲಲ್ಲಿಚಲಿಸುತ್ತಾ, ಸುತ್ತಲೂ ಇರುವ ಪಾವಸೆಗಳಲ್ಲಿ ಆಶೆಯಿಂದ ಓಡಾಡುತಲಿರುವ ಮೀನುಗಳನ್ನು ಭ್ರಾಂತಿ ಗೊಳಿಸುತಲಿವೆ. ನೀರನ್ನು ಅಪ್ಪಳಿಸುವ ವೇಗದಲ್ಲಿ ಹಾರುತಲಿರುವ ತುಂತುರುಗಳಿಗೂ, ಈನುಹೆಳೆಯರು ಕೊರಳಿಗೆ ಹಾಕಿಕೊಂಡಿದ್ದ, ಕಿತ್ತು ಚದರಿ ಹೋಗು ತಲಿರುವ ಹಾರಗಳ ಮುತ್ತುಗಳಿಗೂ ಭೇದನೇಕಾಣ ಬರುವುದಿಲ್ಲ. ಈ ಹೊಳೆಯುವಡದಲ್ಲಿ ಗರಿಗಳನ್ನು ಅರಳಿಸಿರುವ ನವಿಲುಗಳ ಸವಿಯಾದ ಕೇಕಾರವಗಳಂದ ಒಪ್ಪುತ್ತಾ, ಕೇಳಲಿಂಪಾಗಿರುವ ಈ ಮಂಗಳಾಂಗಿಯರ ಗಾನವನ್ನು ಅನುಸರಿಸಿರುವ ಜಲವೆಂಬ ಮದ್ದಳೆಯ ಸದ್ದು ಕಿವಿಯನ್ನು ಹೊಗುತಲಿವೆ. ಇದಲ್ಲದೆ ಈರಮಣಿಯರಲ್ಲಿ ಒಂದು ಪಕ್ಕದವರು - ತಮ್ಮಿದಿರಿಗೆ ನಿಂತಿರುವವರ ಮೋರೆಗಳ ಮೇಲೆ ನೀರನ್ನು ಕರತಳಗಳಿಂದ ಎರಚುತಲಿರುವರು., ಬಳಿಕ ತಾವೂ ಅವರಿಂದ ಮುಖದಮೇಲೆ ಎರಚಲ್ಪಟ್ಟವರಾಗಿ, ವದನಗಳ ಕುಂಕುಮ ಚೂರ್ಣಗಳಿಂದ ಕೆಂಪಾದ ಜಲಕಣಗಳನ್ನು, ನನದು ನೀಳವಾದ ಮುಂಗೂದಲುಗಳತುದಿಗಳಿಂದ ಒಸ್ಟಡಿಸುತಲಿದಾರೆ. ಕೆದರಿದ ಕೂದಲುಳ್ಳದೂ, ಇದ್ದತಾವಿನಿಂದ ಜಾರಿರುವ ಮುತ್ತುಗಳಿಂದ ಮಾಡಿರತಕ್ಕ ಓಲೆಗಳುಳ್ಳುದೂ, ಕದಡಿ ಹೋದ ಕಸ್ತೂರಿಯ ಒಳ್ಳೆಯ ಬರಸೆಯುಳ್ಳುದೂ ಆಗಿರುವ ಈ ಪ್ರಮದೆಯರ ಮುಖ ವೇಷವು ಜಲಕ್ರೀಡೆಯಿಂದ ವಿಕಾರವಾಗಿದ್ದರೂ ಒಂದು ಬಗೆಯಾದ ಮನೋಹರತೆ ಯನ್ನುಂಟು ಮಾಡತಲಿದೆ ಎಂದು ಹೇಳಿ, ಕುಶನು - ವಿಮಾನವಂತಿರುವ ನಾವೆಯಿಂದ ಇಳಿದು, ಅಲುಗುತಲಿರುವ ಕೊರಳ ಹಾರವುಳ್ಳವನಾಗಿ, ಸೊಂಡಿಲಿನಿಂದ ಕಿತ್ತು, ಕೊರಳಿನಲ್ಲಿ ಸಿಲುಕಿಸಿಕೊಂಡಿರುವ ತಾವರೆಯ ಬಳ್ಳಿಯನ್ನುಳ್ಳ ವನದಾನೆಯು-ಹೆಣ್ಣಾನೆ ಗಳೊಡನೆ ಹೇಗೋಹಾಗೆ, ಆಹೆಂಗಳೊಡನೆನೀರಾಟದಲ್ಲಿ ತಾನೂ ಆಸಕ್ತನಾದನು.

ಆ ಬಳಿಕ ಅಬಲೆಯರು - ಹೊಳೆಯುತಲಿರುವ ಆ ಕುಶಮಹಾರಾಜನೊಡನೆ ಸೇರಿ ಬಹಳವಾಗಿ ಪ್ರಕಾಶಿಸುತಲಿದ್ದರು, ಮುತ್ತುಗಳು ಮೊದಲೇ ಸ್ವಭಾವವಾಗಿ ವಿರಾಜಿಸ ತಕ್ಕವುಗಳು, ಇದರ ಮೇಲೆ ಥಳಥಳನೆ ಕಿರಣಗಳನ್ನು ಬೀರುತಲಿರುವ ಇಂದ್ರ ನೀಲಮಣಿಯೊಡನೆ ಕಲೆತರೆ

ಮತ್ತಷ್ಟು ಅಂದವೆಂದು ಹೇಳಬೇಕಾದುದೇನು ? ಆಗಲಾ ವಿಶಾಲನಯನೆ ಯರಾದ ವರವರ್ಣಿನಿಯರು-ಬಂಗಾರದ ಕೊಂಬಿನಕೊಳವಿಯಲ್ಲಿ ತುಂಬಿದ ಬಣ್ಣದ ನೀರನ್ನು ಪ್ರೇಮಾತಿಶಯದಿಂದ ಕುಶನಮೇಲೆ ಚೆಲ್ಲಿದರು, ಅದರಿಂ ದಾತನು-ಗೈರಿಕಧಾತುಗಳಿಂದ ತುಂಬಿರುವ ಬೆಟ್ಟದಂತೆ ವಿಶೇಷವಾಗಿ ಬೆಳಗು ತಲಿದ್ದನು. ಮತ್ತು ಅಂತಃಪುರಸುಂದರಿಯರೊಡನೆ ಉತ್ತಮವೆನಿಸಿದ ಸರಯೂ ನದಿಯ ನಡುವೆ ಇರುವ ಕುಶನು-ಅಪ್ಸರಸ್ತ್ರೀಯರೊಡನೆ ದೇವ ಗಂಗೆಯಲ್ಲಿ ಕ್ರೀಡಾ ಸಕ್ತನಾದ ಅಮರೇಂದ್ರನನ್ನು ಹೋಲುತಲಿದ್ದನು.

ಹೀಗಿರುವಲ್ಲಿ — ಹಿಂದೆ ರಾಮನು ಅಗಸ್ತ್ಯಮಹಾಮುನಿಯಿಂದ ಒಂದು ಅಮೂಲ್ಯವಾದ ಒಡವೆಯನ್ನು ಪಡೆದಿದ್ದು, ಕುಶನ ಪಟ್ಟಾಭಿಷೇ ಕದ ಸಮಯದೊಳಗೆ ರಾಜ್ಯದೊಂದಿಗೆ ಆ ಆಭರಣವನ್ನೂ ಈತನಿಗೆ ಕೊಟ್ಟಿದ್ದನು. ಅದುಯಾವಾಗಲೂ ಕುಶನಕರದಲ್ಲಿಯೇ ಇದ್ದಿತು. ಕ್ರೀಡಾ ಸಕ್ತನಾಗಿದ್ದ ಕುಶನಿಗೆ ಅರಿವಿಲ್ಲದೆಯೇ ಮಹಾಜಯ ಸೂಚಕವಾದ ಆ ಆಭರಣವು ನೀರಿನಲ್ಲಿ ಬಿದ್ದು ಮುಳುಗಿತು. ಕುಶನೃಪತಿಯು - ತನ್ನ ಪ್ರಿಯ ಸತಿಯರೊಡನೆ ಸ್ನಾನಮಾಡಿ, ತೀರ ಕೈತಂದು ಗುಡಾರವನ್ನು ಹೊಕ್ಕಕೂಡಲೇ ಶೃಂಗರಿಸಿಕೊಳ್ಳುವುದಕ್ಕಿಂತಮುಂಚೆಯೇ ದಿವ್ಯಕಟಕದಿಂ ಶೂನ್ಯವಾಗಿರುವ ತನ್ನ ತೋಳನ್ನು ನೋಡಿಕೊಂಡನು, ಆ ಒಡವೆಯು ಜಯಲಕ್ಷ್ಮಿಯನ್ನು ಸಂಪಾದಿಸಿ ಕೊಡತಕ್ಕದು. ಮತ್ತು-ತಂದೆಯೇ ತನ್ನಕೈಗೆ ತೊಡಿಸಿದ್ದುದು; ಈ ಕಾರಣದಿಂದ ಮಾತ್ರವೇ ಆ ಭೂಷಣವು ಕಳೆದು ಹೋದುದನ್ನು ಕುರಿತು ಕುಶನು ಕಳವಳಿಸಿದನು, ಬೇರಾವ ನಿಮಿ ತ್ತದಿಂದಲೂ ಅಲ್ಲ. ಆ ಧೀರನು ಸ್ವಾಭಾವಿಕವಾಗಿ ಆಭರಣಗಳನ್ನು ನಿರ್ಮಾಲ್ಯಪುಷ್ಪಗಳಂತೆ ಭಾವಿಸತಕ್ಕವನಾಗಿದ್ದನು.

ಒಳಿಕ ಹೊಳೆಯೊಳಗೆ ಮುಳುಗುವುದರಲ್ಲಿ ಪಳಗಿರುವ ಜಾಲಿಕರನ್ನು ಕರೆಯಿಸಿದನು, ಆ ಆಭರಣವನ್ನು ಬೇಗನೆ ಹುಡುಕಿ ತರುವಂತೆ ಆಜ್ಞಾ ಪಿಸಿಸಿದನು. ಆ ಬಲೆಗಾರರು ಸರಯೂನದಿಯಲ್ಲಿ ಮುಳು ಮುಳಗಿ, ನೀರಿ ನೊಳಗೆ ಜಲಗಾಡಿ, ತಮ್ಮಪ್ರಯತ್ನವೆಲ್ಲ ವ್ಯರ್ಥವಾದರೂ ಕಳೆಗುಂದದ ಮೊಗದ ಸೊಬಗುಳ್ಳವರಾಗಿ, ಅರಸಿನ ಬಳಿಗೈತಂದು ಎಲೈದೇವನೇ ! ಪ್ರಯತ್ನವನ್ನೇನೋಮಾಡಿದೆವು, ನೀರಿನಲ್ಲಿ ಮುಳುಗಿದ ಆ ನಿನ್ನ ಉತ್ತ ಮಾಭರಣವು ನಮಗೆ ದೊರೆಯಲಿಲ್ಲ, ಆದರೆ ಈ ಆಪಗೆ ಯೊಳಗಡಗಿರುವ

ಕುಮುದನೆಂಬ ನಾಗನು ಅದನ್ನು ಲೋಭದಿಂದ ಅಪಹರಿಸಿರಬಹುದೆಂದು ತೋರುತ್ತದೆ ಎಂದರು

ಆ ಬಳಿಕ — ಬಿಲ್ಲಾಳೂ, ಬಲಶಾಲಿಯೂ ಆಗಿರುವ ಕುಶನು - ಹೊಳೆಯ ದಡದಲ್ಲಿ ನಿಂತು, ಸಿಟ್ಟಿನಿಂದ ಕೆಂಪಡರಿದ ಕಣ್ಣುಳ್ಳುವನಾಗಿ, ಆ ಭುಜಂಗವನ್ನು ನಾಶಪಡಿಸಬೇಕೆಂದು ನೆನೆದು, ಬೇಗನೆ ಬಿಲ್ಲಿಗೆ ಹೆದೆಯನ್ನೇರಿಸಿ ಗಾರುಡಾಸ್ತ್ರವನ್ನು ಸಂಧಾನ ಮಾಡಿದನು. ಆ ಬಾಣಸಂಧಾನದ ವೇಗದಿಂದ ಕೂಡಲೆ ಆ ಮಡುವು - ಕಲಕಲ್ಪಟ್ಟುದಾಗಿ, ಅಲೆಗಳೆಂಬ ಕರಗಳಿಂದ ಕೂಲವನ್ನು ಅಪ್ಪಳಿಸುತ್ತಾ, ಕಪ್ಪದಲ್ಲಿ ಬಿದ್ದ ಕಾಡಾನೆಯಂತೆ ಘೋರವಾಗಿ ಅಬ್ಬರಿಸಿತು. ಆ ಹಿಂದೆ - ಕಡೆಯಲ್ಪಟ್ಟ ಕಡಲಿನಿಂದ ಪದ್ಮಾದೇವಿ ಯೊಂದಿಗೈತಂದ ಪಾರಿಜಾತ ವೃಕ್ಷದಂತೆ, ಒಬ್ಬ ಕನ್ಯೆಯನ್ನು ಮುಂದು ಮಾಡಿಕೊಂಡು, ಕುಮುದನೆಂಬ ಭುಜಂಗರಾಜನು ಆ ಮಡುವಿನಿಂದ ಬೇಗನೆ ಮೇಲ ಕ್ಕೈತಂದನು.

ಪ್ರಜಾಪಾಲಕನಾದಕುಶನು - ತನ್ನ ಆ ಭರಣವನ್ನು ತನಗೇ ಒಪ್ಪಿಸಬೇಕೆಂದು ಕಯ್ಯಲ್ಲಿ ಹಿಡಿದು, ಇದಿರಿಗೆ ಬಂದು ನಿಂತ ಕುಮುದನನ್ನು ಕಂಡು, ಗಾರುತ್ಮತಾಸ್ತ್ರವನ್ನು ಹಿಮ್ಮೆಟ್ಟಿಸಿದನು, ಸಜ್ಜನರ ಸಿಟ್ಟು ತಗ್ಗಿದವರಲ್ಲಿ ಮುಂಜರಿವುದಿಲ್ಲ ವೆಂಬುದು ದಿಟ. ಆಗ - ಗಾರುಡಾಸ್ತ್ರದ, ಮಹಿಮೆಯನ್ನು ಬಲ್ಲವನಾಗಿದ್ದ ಕುಮುದನು - ಬಹುಮಾನಕ್ಕೀಡಾದುದಾಗಿದ್ದರೂ ತನ್ನತಲೆಯನ್ನು ಮೂಲೋಕ ದೊಡೆಯನಾದ ಶ್ರೀರಾಮನ ಕುಮಾರ ನಾಗಿರುವ ಕುಶನಿಗೆ ತಗ್ಗಿಸಿ ಇಂತೆಂದನು:-

ಎಲೈ ದೊರೆಯೇ ! ಕಾರ್ಯವಿಶೇಷದಿಂದ ಮಾನುಷ ವೇಷವನ್ನು ತಾಳಿದ್ದ ವಿಷ್ಣುವಿನ ರೂಪಾಂತರವಾಗಿರುವ ನಿನ್ನನ್ನು ಚೆನ್ನಾಗಿ ಬಲ್ಲೆನು. ಈನಾನು - ನಿನ್ನ ಪ್ರೀತಿಗೆ ಎಂದಿಗೂ ಭಂಗವನ್ನುಂಟು ಮಾಡತಕ್ಕವನಲ್ಲ. ಕೈಪೆಟ್ಟಿನಿಂದ ಪುಟನೆಗೆದು ಮೇಲಕ್ಕೆ ಹಾರಿದ ಚೆಂಡನ್ನು ಆಂತು ಕೊಳ್ಳಲು ಕಯ್ಯನೆತ್ತಿ ನಿರುಕಿಸುತಲಿದ್ದ ಈ ಬಾಲೆಯು ಆಗಸದಿಂದ ಉದಿರುವ ನಕ್ಷತ್ರವನ್ನು ಹೇಗೋಹಾಗೆ, ಮಡುವಿನಿಂದ ಬೀಳುತಲಿರುವ ನಿನ್ನ ಈ ವಿಜಯಾಭರಣವನ್ನು ಕೌತುಕದಿಂದ ಪರಿಗ್ರಹಿಸಿದಳು. ಸೌಭಾಗ್ಯ, ಶೌರ್ಯ, ಕಾರ್ಯನಿರ್ವಾಹ, ಬಲ. ಇತ್ಯಾದಿಗಳಿಗೆ ಗಣಿಯೆನಿಸಿದ ಎಲೈ ಅರಸೇ !

ಮೊಳಕಾಲಿನವರೆಗೆ ನೀಳವಾದುದೂ, ಹೆದೆಯಪೆಟ್ಟಿನಿಂದುಂಟಾದ ಜಡ್ಡಿನಗುರುತುಗಳುಳ್ಳುದೂ, ಭೂಮಿಸಂರಕ್ಷಣೆಗೆ ಅಗುಳಿಯಂತಿರ್ಪುದೂ, ಬಲಿತುದೂ ಆಗಿರುವ ನಿನ್ನಯ ತೋಳು-ಮರಳಿ ಈ ಅಭರಣದ ಯೋಗವನ್ನು ಪಡೆಯಲಿ. ಮತ್ತು-ಎಲೈ ಪಾರ್ಥಿವನೆ ! ತಾನೆಸಗಿದ ತಪ್ಪನ್ನು ನಿನ್ನ ಪಾದಸೇವೆಯಿಂದ ಪರಿಹರಿಸಿ ಕೊಳ್ಳಬೇಕೆಂದು ಬಹುಕಾಲದಿಂದ ಬಯಸುತಲಿರುವ ನನ್ನ ತಂಗಿಯಾದ ಈ ಕುಮುದ್ವತಿಯನ್ನು ಪ್ರೀತಿಪೂರ್ವಕವಾಗಿ ಪರಿಗ್ರಹಿಸಲು ನೀನು ತಕ್ಕವನೆನಿಸದೆಯಿಲ್ಲ ಎಂದು ಹೇಳುತ್ತಿರುವವನಾಗಿಯೇ ಕುಮುದನು ಆ ಭರಣವನ್ನು ತೆಗೆದು ಕೊಟ್ಟುದಲ್ಲದೆ, ಕೂಡಲೆ " ಎಲೈಕುಮುದನೇ ! ನೀನು ಬಹುಮಾನ್ಯನೂ ಮತ್ತು ಬಂಧುವೆನಿಸಿದ್ದೀಯೆ" ಎಂದು ಹೇಳುತಲಿರುವ ಕುಶಮಹಾರಾಜನಿಗೆ ತನ್ನ ಬಂಧುವರ್ಗದಿಂದೊಡಗೂಡಿ, ಕುಲಭೂಷಣ ವೆನಿಸಿರುವ ಕನ್ಯಾರೂಪವಾದ ಆಭರಣವನ್ನೂ ವಿಧಿಪ್ರಕಾರವಾಗಿ ಒಪ್ಪಿಸಿದನು. ಆಗಲಾ ಕುಶಕುವಲಯೇಶನು-ಪ್ರಜ್ವಲಿಸುತಲಿರುವ ಅಗ್ನಿಯ ಇದಿರಿನಲ್ಲಿ ಸಹಧರ್ಮಾಚರಣೆಗಾಗಿ ಊರ್ಣಾಮಂಗಳ ಸೂತ್ರದಿಂದ ಬೆಳಗುತಲಿರುವ ಕುಮುದ್ವತಿಯ ಪಾಣಿಯನ್ನು ಪರಿಗ್ರಹಿಸಿದನು. ದಿವ್ಯಮಂಗಳವಾದ್ಯಧ್ವನಿಯು - ದಿಗಂತಗಳಲ್ಲಿ ಪರಡುತಲಿದ್ದಿತು. ಸುವಾಸನೆಯಿಂದ ಅಚ್ಚರಿಯೆನಿಸುವಂತೆ ಮೇಘಗಳುಪೂಮಳೆಗರೆಯುತಲಿದ್ದುವು.

ಇಂತು ಕುಮುದನು - ಮೂಲೋಕದೊಡೆಯನೆನಿಸಿದ ಶ್ರೀರಾಮನಿಗೆ ಔರಸಪುತ್ರನಾದ ಮೈಥಿಲೇಯನನ್ನೂ, ಕುಶಭೂಮಿಪಾಲನು - ತಕ್ಷಕನಿಗೆ ಐದನೆಯಮಗನಾದ ಕುಮುದನಾಗನನ್ನೂ ಬಂಧು ವನ್ನಾಗಿ ಪಡೆದು, ಬಳಿಕ ಆ ಇಬ್ಬರಲ್ಲೊಬ್ಬನಾದ ಕುಮುದನು ತನ್ನತಂದೆಯ ಮೂಲಕಹಗೆಯಾದ ಗರುಡನಿಂದ ಭಯವಿಲ್ಲದಂತೆ ವೈಷ್ಣವಾಂಶನಾದ ಕುಶನಿಂದ ಅಭಯವನ್ನು ಹೊಂದಿ ಹೊರಟು ಹೋದನು. ಎರಡನೆಯವನಾದಕುಶಭೂಪಾಲನೂ - ಕುಮುದನ ಅಪ್ಪಣೆಯಿಂದ ತನ್ನ ಭೂಮಿಯನ್ನು ಸರ್ಪಭಯವಿಲ್ಲದುದನ್ನಾಗಿ ಮಾಡಿಕೊಂಡು ಪುರಜನಪ್ರಿಯನೆನಿಸಿ ನಾಡಿನಾಳ್ವಿಕೆ ಗಾಗಿ ತೆರಳಿದನು.

—ಇಂತು ಕುಮುದ್ವತೀ ಪರಿಣಯವೆಂಬ ಹದಿನಾರನೆಯ ಅಧ್ಯಾಯಂ—

ಓಂ ಪರಮಾತ್ಮನೇನಮಃ.

# ಹದಿನೇಳನೆಯ ಅಧ್ಯಾಯಂ.

ಕಂ|| ಅತಿಥಿ ಕುಶ ನಾಗೆ ಯಿಂದ್ರಾ !
ಗತಿಥಿ ಯೆನಿಪ್ಪವನ ಪುತ್ರ ನೀ ವಸುಮತಿಯಾ ||
ಅತುಳ ಯಶಂಬಡೆ ದಾರ್ದ್ದಂ |
ಕ್ರತುಗಳ ನೆಸಗುತ್ತೆತಣಿಸಿ ಸುರಭೂ ಸುರರಂ||

ರಾತ್ರಿಯ ಕೊನೆಯ ಭಾಗವಾದ ಬೆಳಗಿನಜಾವದಲ್ಲಿ ಬುದ್ಧಿಯು ಲವಲವಿಕೆಯನ್ನು ಪಡೆವಂತೆ ಕುಮುದ್ವತೀ ದೇವಿಯು ಆ ಕಕುತ್ಸ್ಥ ವಂಶೋತ್ಪನ್ನನಾದ ಕುಶಮಹಾರಾಜನಿಂದ ಅತಿಥಿ, ಎಂಬ ಸುಪುತ್ರ ನನ್ನು ಪಡೆದಳು. ಆ ಅತಿಥಿಯು ತಂದೆಯ ಸುಶಿಕ್ಷೆಯಲ್ಲಿ ಒಳೆದವನಾದ ಕಾರಣ ಮಹಾತೇಜೋರಾಶಿಯಾದ ಸೂರ್ಯನು ಪ್ರಪಂಚದ ಉತ್ತರ ಮತ್ತು ದಕ್ಷಿಣ ಭಾಗಗಳೆರಡನ್ನೂ ತನ್ನ ಕಿರಣಗಳಿಂದ ಪರಿಶುದ್ಧ ಮಾಡುವಂತೆ, ತನ್ನ ಸದಾಚಾರಮಹಿಮೆಯಿಂದ ತಂದೆಯಕುಲವನ್ನೂ, ತಾಯಿಯಕುಲವನ್ನೂ ಶುದ್ಧವಾಗಿಮಾಡಿದನು, ನೀತಿಶಾಸ್ತ್ರ ಸಂಪನ್ನನಾದ ಕುಶರಾಜನು ಮೊದಲು ತನ್ನ ಮಗನಿಗೆ ಕುಲವಿದ್ಯೆಯಾದ ಆನ್ವೀಕ್ಷಿ, ತ್ರಯೀ, ವಾರ್ತಾ, ದಂಡನೀತಿ ಮೊದಲಾದ ಶಾಸ್ತ್ರಗಳನ್ನು ಚೆನ್ನಾಗಿಕ ಲಿಸಿ, ತರುವಾಯ ಕುಲೀನೆಯರಾದ ಕ್ಷತ್ರಿಯ ಕನ್ಯೆಯರನ್ನು ಪಾಣಿಗ್ರ ಹಣಮಾಡಿಸಿದನು. ಕುಲೀನನಾಗಿಯೂ, ಪರಾಕ್ರಮಿಯಾಗಿಯೂ, ಜಿತೇಂ ದ್ರಿಯನಾಗಿಯೂ ಇರುವ ಕುಶಮಹಾರಾಜನು, ಎಲ್ಲಾವಿಷಯದಲ್ಲಿಯೂ ತನ್ನಂತೆಯೇ ಇರುವ ಮಗನನ್ನುನೋಡಿ, ಒಬ್ಬನಾಗಿದ್ದ ತನ್ನನ್ನು ಇಬ್ಬ ರೆಂದು ಭಾವಿಸಿದನು. ತರುವಾಯ ಕುಶನು, ತಮ್ಮ ವಂಶದ ರಾಜರೆಲ್ಲ ರಿಗೂ ಪೂರ್ವದಿಂದ ಬಂದಿರುವ ಸಂಪ್ರದಾಯದಂತೆ ಇಂದ್ರನಿಗೆ ಸಹಾ ಯಾರ್ಥವಾಗಿ ಸ್ವರ್ಗಕ್ಕೆತೆರಳಿ ದುರ್ಜಯನಾದ ದುರ್ಜಯನೆಂಬ ರಾಕ್ಷಸ ನನ್ನು ಯುದ್ಧದಲ್ಲಿಕೊಂದನು. ನಾಗರಾಜನಾದ ಕುಮುದನ ಪುತ್ರಿಯಾದ

ಕುಮುದ್ವತಿಯು, ಲೋಕಕ್ಕೆ ಆಹ್ಲಾದಕರನಾಗಿಯೂ, ಕುಮುದಪುಷ್ಪ ಗಳಿಗೆ ಆನಂದದಾಯಕನಾಗಿಯೂ, ಇರುವ ಚಂದ್ರನನ್ನು ಬೆಳ್ದಿಂಗಳು ಕೂಡಿರುವಂತೆ, ಕುಶನನ್ನು ಹಿಂಬಾಲಿಸಿ ತಾನೂ ಸ್ವರ್ಗಲೋಕಕ್ಕೆಹೋಗಿ ರಲು, ಕುಶನು ಯುದ್ಧದಲ್ಲಿಜಯಶಾಲಿಯಾದುದರಿಂದ, ದೇವೇಂದ್ರನ ಅರ್ಧ ಸಿಂಹಾಸನವನ್ನು ಪಡೆದನು. ಕುಮುದ್ವತಿಯು ಇಂದ್ರಪತ್ನಿಯಾದ ಶಚೀ ದೇವಿಯ ಸಖಿಯಾಗಿ ಪಾರಿಜಾತಾದಿ ಕಲ್ಪವೃಕ್ಷಗಳಲ್ಲಿ ಶಚಿಯಂತೆ ತಾನೂ ಭಾಗಕ್ಕೆ ಅರ್ಹಳಾದಳು. ಕುಶನ ಮಂತ್ರಿಗಳು - ಬಹುಕಾಲವಾದರೂ ಯುದ್ಧಾರ್ಥವಾಗಿ ಸ್ವರ್ಗಕ್ಕೆ ಹೋಗಿರುವ ತಮ್ಮ ರಾಜದಂಪತಿಗಳು ಬಾರ ದೆಹೋದುದನ್ನು ಕಂಡು, ಕುಶನು ಮೊದಲೆ ಅಪ್ಪಣೆ ಮಾಡಿದ್ದಂತೆ ಆತನ ಪುತ್ರನಾದ ಅತಿಥಿಯನ್ನು ಪಟ್ಟಾಭಿಷಿಕ್ತನನ್ನಾಗಿಮಾಡಿ ರಾಜ್ಯದಲ್ಲಿ ನಿಲ್ಲಿಸಿದರು. ಪಟ್ಟಾಭಿಷೇಕ ಮಂಟಪವನ್ನು ಕಟ್ಟಿಸುವುದಕ್ಕಾಗಿ ಶಿಲ್ಪ ಶಾಸ್ತ್ರ ನಿಪುಣರನ್ನು ಕರೆಯಿಸಿ ಮಂತ್ರಿಗಳು ಆಜ್ಞೆಮಾಡಲು, ಅವರು ನಾಲ್ಕು ದಿವ್ಯಸ್ತಂಭಗಳಿಂದಲೂ, ದೊಡ್ಡದಾದಚಾವಣಿಯಿಂದಲೂ, ರಮ್ಯ ವಾಗಿರುವ ಭದ್ರಮಂಟಪವನ್ನು ನೂತನರೀತಿಯಿಂದ ನಿರ್ಮಿಸಿದರು. ಆಭದ್ರ ಮಂಟಪದಲ್ಲಿರುವ ವೇದಿಕೆಯಲ್ಲಿ ಭದ್ರಪೀಠದಮೇಲೆ ಅತಿಥಿಯನ್ನು ಕುಳ್ಳಿ ರಿಸಿ ಸುವರ್ಣಕುಂಭಗಳಲ್ಲಿ ತರಿಸಿರುವ ತೀರ್ಥೋದಕಗಳಿಂದ ಮಂತ್ರಿಗಳೆ ಲ್ಲರೂ ಅಭಿಷೇಕಮಾಡಿದರು. ಆ ಕಾಲದಲ್ಲಿ ಮೃದುಮಧುರ ಗಂಭೀರವಾಗಿ ಮೊಳಗುತ್ತಿದ್ದ ಪುಷ್ಕರವೇಮೊದಲಾದ ಶುಭವಾದ್ಯಗಳು ಅತಿಥಿಗೆ ಮುಂದೆ ಶುಭಪರಂಪರೆಗಳನ್ನು ಸೂಚಿಸುವಂತಿದ್ದುವು. ಗರಿಕೆ, ಯವಧಾನ್ಯದ ಮೊಳಕೆ, ಅರಳಿಯ ತೊಗಟೆ, ಎಳೆಯಚಿಗುರು, ಇಪ್ಪೆಯಹೂ, ಕಮಲ ಗಳು, ಮೊದಲಾದವುಗಳಿಂದ, ಜ್ಞಾತಿವೃದ್ಧರು ರಕ್ಷಾರ್ಥವಾಗಿಯೂ, ಮಂ ಗಳಾರ್ಥವಾಗಿಯೂ ಆರತಿಗಳನ್ನೆತ್ತಿದರು. ಪುರೋಹಿತರೇ ಮೊದಲಾದ ಬ್ರಾಹ್ಮಣರು- ಜಯಶೀಲಗಳಾದ,ಅಥರ್ವಣಮಂತ್ರಗಳಿಂದ ಆ ಜಯಶೀಲ ನಾದ ಅತಿಥಿಗೆ ಮೊದಲು ಅಭಿಷೇಕವನ್ನು ಮಾಡಿದರು. ಅತಿಥಿಯ ತಲೆಯ ಮೇಲೆ ಸುರಿಯುತ್ತಿರುವ ಅಭಿಷೇಕ ಜಲರಾಶಿಯು- ತ್ರಿಪುರಸಂಹಾರಿ ಯಾದ ಪರಮೇಶ್ವರನ ಮಸ್ತಕದಲ್ಲಿರುವ ಗಂಗಾಪ್ರವಾಹದಂತೆ ಕಂಗೊಳಿ ಸುತ್ತಿದ್ದಿತು, ಆಗ ಸ್ತುತಿಪಾಠಕರು- ಬಿರುದಾವಳಿಗಳೊಡನೆ ಹೊಗಳುತ್ತಿ

ಕಲು, ವರ್ಷಾಕಾಲದಲ್ಲಿ ವಿಜೃಂಭಿಸುತ್ತಿರುವ ಮೇಘಮಂಡಲವನ್ನು ನೋಡಿ ಚಾತಕಪಕ್ಷಿಗಳು ಅಭಿನಂದಿಸುವಂತೆ, ಎಲ್ಲರ ನಿರೀಕ್ಷಣೆಗೂ ರಾಜಪುತ್ರನು ಪಾತ್ರನಾಗಿದ್ದನು. ದಿವ್ಯಮಂತ್ರ ಪೂತಗಳಾದ ಉದಕಗಳಿಂದ ಅಭಿಷಿಕ್ತನಾದ ಅತಿಥಿಯು ತೇಜಸ್ಸು, ಮಳೆಯು ಸುರಿಯುತ್ತಿರುವಾಗ ಮಿಂಚು ಹೆಚ್ಚಾಗಿ ಹುಟ್ಟಿ ಹೊಳೆಯುವಂತೆ ಮತ್ತಷ್ಟು ಅಭಿವೃದ್ಧಿಯನ್ನು ಹೊಂದುತ್ತಿತ್ತು. ಪಟ್ಟಾಭಿಷೇಕವಾದಮೇಲೆ ಬಹುಮಂದಿ ಗೃಹಸ್ಥಾಶ್ರಮಿಗಳಿಗೆ, ಅವರು ಬೇಕಾದಷ್ಟು ದಾನ ದಕ್ಷಿಣೆಗಳಿಂದ ಕೂಡಿದ ಯಜ್ಞವನ್ನು ಮಾಡುವುದಕ್ಕೆ ಎಷ್ಟು ಹಣವು ಬೇಕಾಗುತ್ತದೆಯೋ ಅಷ್ಟು ದ್ರವ್ಯವನ್ನೂ ದಾನಮಾಡಿದನು. ಆಗ ಬ್ರಾಹ್ಮಣರು ಮಾಡಿದ ಆಶೀರ್ವಾದಗಳು ತತ್ಕಾಲ ಫಲಕಾರಿಗಳಾದುದರಿಂದ ಈ ಅತಿಥಿಯು ಜನ್ಮಾಂತರ ಪುಣ್ಯವಿಶೇಷಗಳಿಂದ ಉಂಟಾದ ರಾಜ್ಯಲಾಭ ಮೊದಲಾದ ಫಲಗಳನ್ನು ತಮ್ಮ ಮಹಿಮೆಯಿಂದ ತಿರಸ್ಕರಿಸುವಂತಿದ್ದುವು. ಆ ಕಾಲದಲ್ಲಿ ಅಥಿತಿಯು ಸಂತೋಷ ಸೂಚನಾರ್ಥವಾಗಿ ಕಾರಾಗೃಹದಲ್ಲಿ ನಿರ್ಬಂಧದಲ್ಲಿದ್ದವರನ್ನೆಲ್ಲಾ ಬಿಡಿಸಿದನು. ಮರಣದಂಡನೆಗೆ ಅರ್ಹರಾಗಿದ್ದವರನ್ನು ಮನ್ನಿಸಿ ಬಿಟ್ಟುಬಿಟ್ಟನು, ಭಾರವನ್ನು ಹೊತ್ತು ಜೀವಿಸುತ್ತಿದ್ದ ಎತ್ತು ಮೊದಲಾದ ಪ್ರಾಣಿಗಳು ಭಾರವನ್ನು ಹೊರುವುದನ್ನು ತಪ್ಪಿಸಿದನು, ಕರುಗಳಿಗೆ ತೃಪ್ತಿಯಾಗಲೆಂದು ಹಸುಗಳಲ್ಲಿ ಹಾಲನ್ನು ಕರೆಯದಂತೆ ಬಿಡಿಸಿದನು. ಅಂತಃಪುರದಲ್ಲಿ ಕ್ರೀಡಾರ್ಥವಾಗಿ ಪಂಜರದಲ್ಲಿಟ್ಟುಕೊಂಡಿದ್ದ ಶುಕಶಾರಿಕಾದಿ ಪಕ್ಷಿಗಳನ್ನುಕೂಡ ಸ್ವೇಚ್ಛೆಯಾಗಿ ಹಾರಾಡುವಂತೆ ಬಿಡಲು ಅಪ್ಪಣೆಮಾಡಿದನು. ಅವು ಬಂಧಮೋಚನೆಯನ್ನು ಪಡೆದು ಮನಬಂದೆಡೆಗಳಲ್ಲಿ ಸಂಚರಿಸುತ್ತಿದ್ದವು. ಬಳಿಕ ಅತಿಥಿಯು ತನ್ನ ಪ್ರಾಸಾದದ ಒಂದು ಭಾಗದಲ್ಲಿದ್ದ ದಂತದ ಪೀಠದಮೇಲೆ ಅಲಂಕಾರಮಾಡಿಸಿಕೊಳ್ಳುವುದಕ್ಕಾಗಿ ಬಂದು ಕುಳಿತುಕೊಂಡನು. ಅಲಂಕಾರಮಾಡತಕ್ಕವರು ಕೈಗಳನ್ನು ತೊಳೆದುಕೊಂಡು ಅನೇಕ ಸುವಾಸನಾ ಸಾಮಗ್ರಿಗಳಿಂದ ಆತನ ಕೇಶಪಾಶವನ್ನು ಶೋಧನೆಮಾಡಿ, ಗಂಧ, ಪೂಷ್ಪಾದಿಗಳಿಂದ ಅವನಿಗೆ ಅಲಂಕಾರಮಾಡಿದರು. ಪುಷ್ಪಮಾಲಿಕೆಯನ್ನು ಕೂದಲಿನಲ್ಲಿ ಸೇರಿಸಿಕಟ್ಟಿ, ಅದಕ್ಕೆ ಮುತ್ತಿನಸರವನ್ನು ಸುತ್ತಿ- ಆತನ ಮಸ್ತಕವನ್ನು ದೇದೀಪ್ಯಮಾನವಾದ ಪದ್ಮರಾಗ

ಮಣಿಯಿಂದ ಅಲಂಕರಿಸಿದರು. ಘಮಘಮಿಸುತ್ತಿರುವ ಕಸ್ತೂರಿಯ ಗಂಧದಿಂದ ಅಂಗಲೇಪವನ್ನು ಮಾಡಿ, ಗೋರೋಚನದಿಂದ ಪತ್ರರಚನೆಯನ್ನೂ ಮಾಡಿದರು. ನವರತ್ನಖಚಿತವಾದ ದಿವ್ಯಾಭರಣಗಳನ್ನೂ, ಪುಷ್ಪಮಾಲಿಕೆಯನ್ನೂ, ಹಂಸಪಕ್ಷಿಗಳ ಚಿತ್ರದಿಂದ ಹೊಳೆಯುತ್ತಿರುವ ದುಕೂಲವನ್ನೂ ಧರಿಸಿ, ರಾಜ್ಯಲಕ್ಷ್ಮೀರಮಣನಾಗಿ, ಮನೋಹರನಾಗಿರುವ ಆ ಅತಿಥಿಯನ್ನು ಎಲ್ಲರೂ ದರ್ಶನಮಾಡುವ ಕುತೂಹಲವುಳ್ಳವರಾಗಿದ್ದರು, ಸುವರ್ಣದರ್ಪಣದಲ್ಲಿ ತನ್ನ ಅಲಂಕಾರವನ್ನು ನೋಡಿಕೊಳ್ಳುತ್ತಿದ್ದ ಆ ಅತಿಥಿಗೆ ಆತನ ಪ್ರತಿಬಿಂಬವು- ಮೇರುಶಿಖರದಲ್ಲಿ ಉದಿತನಾದ ಸೂರ್ಯನಲ್ಲಿ ಪ್ರತಿಬಿಂಬಿಸುತ್ತಿರುವ ಕಲ್ಪವೃಕ್ಷದ ನೆರಳಿನೋಪಾದಿಯಲ್ಲಿ ಪ್ರಕಾಶಿಸುತ್ತಿತ್ತು, ರಾಜಶ್ರೇಷ್ಠನಾದ ಅತಿಥಿಯು - ಛತ್ರಚಾಮರಾದಿ ರಾಜಚಿಹ್ನೆಗಳನ್ನು ತಮ್ಮಕೈಯಲ್ಲಿ ಹಿಡಿದುಕೊಂಡು ಉಭಯಪಾರ್ಶ್ವಗಳಲ್ಲಿಯೂ ಪರಾಕ್, ಎಂದು ಜಯಶಬ್ದಗಳನ್ನು ಹೇಳುತ್ತಿರುವದಾಸಿಯರೊಡನೆ ಬಂದುದೇವೇಂದ್ರನ ಸುಧರ್ಮೆಎಂಬಸಭೆಗೆ ಸದೃಶವಾದ ಸಭೆಯನ್ನು ಹೊಕ್ಕನು. ಅಲ್ಲಿ ಅಧಿರಾಜರುಗಳು ನಮಸ್ಕರಿಸುತ್ತಿರುವಾಗ ಅವರಕಿರೀಟದಲ್ಲಿ ಕೆತ್ತಿರುವ ರತ್ನಗಳುತಗುಲಿತಗುಲಿಗುರುತಾಗಿರುವ ಕೆಳಭಾಗವುಳ್ಳದ್ದಾಗಿಯೂ ಮೇಲ್ಕಟ್ಟಿನಿಂದ ರಮ್ಯವಾಗಿಯೂ ಇರುವ ತಂದೆಯಸಿಂಹಾಸನವನ್ನುಹತ್ತಿದನು. ಮಂಗಳಕ್ಕೆ ನೆಲೆಯಾಗಿಯೂ, ವಿಸ್ತಾರವಾಗಿಯೂ, ಶ್ರೀವತ್ಸವೆಂಬ ಮಚ್ಚೆಯ ಆಕಾರದಿಂದ ಪ್ರಕಾಶಮಾನವಾಗಿಯೂ ಇರುವ ಆ ಸಭಾಮಂದಿರವು, ಅತಿಥಿಯಿಂದೊಡಗೂಡಿ ಕೌಸ್ತುಭರತ್ನದಕಾಂತಿಯಿಂದ ವ್ಯಾಪ್ತವಾದ ಶ್ರೀವತ್ಸವೆಂಬ ಗುರುತುಳ್ಳ ಶ್ರೀಮಹಾವಿಷ್ಣುವಿನ ವಕ್ಷಃಸ್ಥಲದಂತೆ ಹೊಳೆಯುತ್ತಿದ್ದಿತು. ಅತಿಥಿಗೆ ಬಾಲ್ಯವಾದುದರಿಂದ ಮೊದಲು ಯೌವರಾಜ್ಯವನ್ನುಹೊಂದಿ ಬಳಿಕ ಅಧಿರಾಜ ಪದವಿಯನ್ನೂ ಹೊಂದಿದನು, ಆಗ ರೇಖೆಯು ಕಡಿಮೆಯಾಗಿರೋಣದರಿಂದ ಮೊದಲು ಅರ್ಧಚಂದ್ರತ್ವವನ್ನು ಪಡೆದು, ಬಳಿಕಪೂರ್ಣತ್ವವನ್ನೂ ಹೊಂದಿ ಪ್ರಕಾಶಿಸುವ ಚಂದ್ರನಂತ ಹೊಳೆಯುತ್ತಿದ್ದನು. ಕಳಕಳಿಸುತ್ತಿರುವ ಮುಖದಿಂದಲೂ, ನಗೆಯೊಡನೆ ಆಡುತ್ತಿರುವ ಮಾತಿನಿಂದಲೂ, ಅವನನ್ನುಸೇವಕರೆಲ್ಲರೂ - ವಿಶ್ವಾಸವೇ ಮೂರ್ತಿಭವಿಸಿರುವಂತೆ ತಿಳಿದರು. ಇಂಥ ಸಂಪತ್ತುಳ್ಳ ಅತಿಥಿಯು - ಕಲ್ಪವೃಕ್ಷಸಮಾನಗಳಾದ ಧ್ವಜಗಳಿಂದ ಮನೋಹರವಾಗಿ

ಸುವ ಆ ಅಯೋಧ್ಯಾಪುರವನ್ನು ಐರಾವತದಂತಿರುವ ಆನೆಯಮೇಲೆ ಕುಳಿತು ಸಂಚರಿಸುತ್ತಾ ಸ್ವರ್ಗದಂತೆ ಮಾಡಿದನು, ದೊರೆಯ ತಲೆಯಮೇಲೆ ಛತ್ರವನ್ನೂ ಎತ್ತಿಹಿಡಿಯಲು ಆಶ್ಚೀತಚ್ಛತ್ರದನೆಳಲು. ಸಕಲಜಗತ್ತಿಗೂ ಉಂಟಾಗಿದ್ದ ಕುಶರಾಜನ ವಿಯೋಗದುಃಖದ ಸಂತಾಪವನ್ನು ಪರಿಹರಿಸು ವಂತಿತ್ತು, ಪ್ರಜೆಗಳೆಲ್ಲರೂ ನವೀನರಾಜನ ಏಳಿಗೆಯನ್ನು ನೋಡಿ ಪೂರ್ವರಾಜನ ವಿಯೋಗದುಃಖವನ್ನು ಮರೆತರು. ಬೆಂಕಿಯು ಹೊಗೆ ಯಾಡಿದ ಮೇಲೆ ಉರಿಪುಟ್ಟುವುದು, ಸೂರ್ಯನು ಉದಯಿಸಿದಮೇಲೆ ಕಿರಣಗಳು ಹೊರಡುವವು. ತೇಜಸ್ಸುಗಳ ಉತ್ಪತ್ತಿಯು ಈರೀತಿಯಾಗಿ ಲೋಕಪ್ರಸಿದ್ಧವಾಗಿದೆ. ಇಂತ ತೇಜಸ್ಸಿನ ವೃತ್ತಿಯಸ್ವಭಾವವನ್ನೂ ಅತಿಕ್ರಮಿಸಿ ಅತಿಥಿಯು - ಗುಣಗಳೊಡನೆಯೇ ಹುಟ್ಟಿದನು. ಇದು ಅಪೂರ್ವವಾದದ್ದು, ಪೌರನಾರಿಯರು ಪ್ರೀತಿಸೂಚಕವಾದ ಪ್ರಸ ನ್ನದೃಷ್ಟಿಯಿಂದ ನೋಡುತ್ತಿರಲು, ಶರತ್ಕಾಲದಲ್ಲಿ ಥಳಥಳಸುತ್ತಿ ರುವ ನಕ್ಷತ್ರಗಳಿಂದ ರಾತ್ರಿಗಳು ಧ್ರುವಮಂಡಲವನ್ನು ನೋಡುವಂತಿತ್ತು. ಪ್ರಶಸ್ತವಾದ ದೇವಾಲಯಗಳಲ್ಲಿ ಪೂಜೆಯನ್ನು ಹೊಂದುತ್ತಿರುವ ಅಯೋ ಧ್ಯಾಪುರದ ದೇವತೆಗಳೆಲ್ಲವೂ, ತಮ್ಮ ಅನುಗ್ರಹಕ್ಕೆ ಪಾತ್ರನಾದ ಅತಿ ಥಿಗೆ ಆಯಾಪ್ರತಿಮೆಗಳಲ್ಲಿ ನೆಲಸಿರುವ ತಮ್ಮ ಸಾನಿಧ್ಯಬಲದಿಂದ ಅನು ಗ್ರಹಮಾಡಿದವು. ಅತಿಥಿಗೆ ಪಟ್ಟಾಭಿಷೇಕಮಾಡಿದ ಜಲದಿಂದ ನೆನೆದಿರುವ ಭದ್ರವೇದಿಕೆಯು ಒಣಗುವದರೊಳಗಾಗಿ ಅವನ ಅಶಕ್ಯವಾದ ಪ್ರತಾಪವು ದಿಗಂತಗಳನ್ನು ವ್ಯಾಪಿಸಿತು. ಗುರುವಾದ ವಶಿಷ್ಠಮಹರ್ಷಿಯ ಮಂತ್ರಾ ಲೋಚನೆಗಳೂ, ಮಹಾ ಪರಾಕ್ರಮಿಯಾದ ಅತಿಥಿಯ ಬಾಣಗಳೂ ಈ ಎರಡೂಸೇರಲು ಲೋಕದಲ್ಲಿ ಅಸಾಧ್ಯವಾದ ಕಾರ್ಯವುಂಟೇ ? ಎಲ್ಲವೂ ಸಾಧ್ಯವೇ ಆಗುತ್ತಿತ್ತು. ಪಕ್ಷಪಾತವಿಲ್ಲದೆ ಸರ್ವತ್ರ ಸಮಬುದ್ಧಿಯುಳ್ಳ ಸಾಮಾಜಿಕರನ್ನು ತನ್ನ ಸಭೆಯಲ್ಲಿ ನೇಮಿಸಿಕೊಂಡಿರುವ ಆ ಅತಿಥಿಯು, ಕಕ್ಷಿ ಪ್ರತಿಕಕ್ಷಿಗಳ ಸಾಲತರುವುದು ಕೊಡುವುದು ಮೊದಲಾದವುಗಳಲ್ಲಿ ಅನುಮಾನಾಸ್ಪದವಾದ ವಿವಾದಗಳನ್ನು ತಾನೇ ವಿಚಾರಿಸಿ ತೀರ್ಮಾನಮಾಡು ತ್ತಿದ್ದನು. ವ್ಯವಹಾರಗಳನ್ನು ವಿಚಾರಿಸಿದ ತರುವಾಯ ಪ್ರಸನ್ನವಾದ ಮುಖದಿಂದಲೇ ಭೃತ್ಯರಿಗೆ ತಮ್ಮ ಯಜಮಾನನಿಂದ ಇಷ್ಟಾರ್ಥಸಿದ್ಧಿಯುಂ

ಟಾಗುವುದೆಂಬ ಭಾವನೆಯನ್ನು ಸೂಚಿಸಲು, ಕೂಡಲೆ ಅವರು ಯಾಚಿಸಿ ತಮ್ಮತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳುತ್ತಿದ್ದರು.

ಪ್ರಜೆಗಳು - ಶ್ರಾವಣಮಾಸದಿಂದ ನದಿಗಳು ಹೆಚ್ಚುವಂತೆ ತಮ್ಮ ರಾಜನಿಂದ ಪೋಷಣೆಯನ್ನುಹೊಂದಿ ಅಭಿವೃದ್ಧಿಯನ್ನು ಪಡೆಯಲು, ಆ ನದಿಗಳೇ ಭಾದ್ರಪದಮಾಸದಲ್ಲಿ ಹೆಚ್ಚಾದ ಅಭಿವೃದ್ಧಿಯನ್ನುಂಟುಮಾಡು ವಂತೆ ಅತಿಥಿಯು ಏಳಿಗೆಯಲ್ಲಿ ಪ್ರಜೆಗಳೆಲ್ಲರೂ ಬದ್ಧಾದರರಾಗಿದ್ದರೂ, ತಾನು ಆಡಿದಮಾತನ್ನು ಎಂದಿಗೂ ತಪ್ಪುತ್ತಿರಲಿಲ್ಲ. ಕೊಟ್ಟಪದಾರ್ಥವನ್ನು ಪುನಃ ಅಪಹರಿಸುತ್ತಿರಲಿಲ್ಲ. ಇಂತಹ ದೃಢವ್ರತನಾದ ಅತಿಥಿಯು ಶತ್ರು ರಾಜರನ್ನು ನಿರ್ಮೂಲಮಾಡುವೆನೆಂದು ಹೇಳಿ ಅವರನ್ನು ಜಯಿಸಿದ ತರ್ವಾಯ ಪುನಃ ಅವರರಾಜ್ಯವನ್ನು ಕಿತ್ತುಕೊಳ್ಳದೆ ಕರುಣೆಯಿಂದ ಅವರಿಗೇ ಕೊಡುತ್ತಿದ್ದದ್ದರಿಂದ, ಈ ವಿಷಯದಲ್ಲಿಮಾತ್ರವೇ ಆಡಿದ ಮಾತನ್ನು ತಪ್ಪಿ ಹೋಗಿ ವ್ರತಭಂಗವನ್ನು ಪಡೆಯುತ್ತಿದ್ದನು. ವಯಸ್ಸು, ರೂಪ, ಐಶ್ವರ್ಯ, ಇವುಗಳಲ್ಲಿ ಒಂದೊಂದೂ ಗರ್ವಕ್ಕೆ ಕಾರಣವೆಂದು ಬಲ್ಲವರು ಹೇಳುವರು, ಈ ಮೂರೂ ಒಟ್ಟಿಗೆ ಈ ರಾಜನಲ್ಲಿದ್ದರೂ, ಅವನ ಮನಸ್ಸಿನಲ್ಲಿ ಗರ್ವವು ಹುಟ್ಟಲಿಲ್ಲ. ಆದಕಾರಣ ಅತಿಥಿಯು ಮಹಾ ಜಿತೇಂದ್ರಿಯನೆಂಬುವಕ್ಕೆ ಯಾವ ಸಂದೇಹವೂಇಲ್ಲ. ಈ ಪ್ರಕಾರವಾಗಿ ಪ್ರಜೆಗಳ ಅನುರಾಗವು ದೊರೆಯಲ್ಲಿ ದಿನೇದಿನೇ ಬೆಳೆಯುತ್ತಾಬರಲು, ಅತಿಥಿಯುಹೊಸದಾಗಿ ರಾಜ ನಾದವನಾದರೂಚೆನ್ನಾಗಿಬೇರುಗಳನ್ನು ಊರಿಕೊಂಡಿರುವ ಮಹಾ ವೃಕ್ಷ ದಂತೆ ಎಲ್ಲರಿಗೂ ಅಸಾಧ್ಯನಾಗಿದ್ದನು. ಶತ್ರುರಾಜರು ಬಹು ದೂರದಲ್ಲಿ ರತಕ್ಕವರು, ಮತ್ತು ಸರ್ವದಾ ದ್ವೇಷಿಗಳಾಗಿರದೆಯೂ ಇರುವರು. ಆದ ಕಾರಣ ಈ ಬಾಹ್ಯ ಶತ್ರುಗಳನ್ನು ಬಿಟ್ಟು ಸರ್ವದಾ ಶತ್ರುತ್ವವನ್ನು ಸಾಧಿ ಸುತ್ತಾ ತನ್ನಲ್ಲಿಯೇ ಆವರಿಸಿಕೊಂಡಿರುವ ಅಂತಶ್ಶತ್ರುಗಳಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಆರುಮಂದಿಗಳನ್ನು ಮೊದಲು ಜಯಿಸಿದನು. ಇಂತಹ ಅಂತಶ್ಶತ್ರುಗಳನ್ನೇ ಜಯಿಸಿರುವಾಗ ಬಾಹ್ಯ ಶತ್ರುಗಳ ಜಯವು ಕಿಂಚಿತ್ಕರವಲ್ಲವೇ! ಲಕ್ಷ್ಮಿಯು ಸ್ವಭಾವದಿಂದ ಚಂಚಲಳಾದರೂ ಆಕೆಯು ಅನುಗ್ರಹವನ್ನೇ ಎದುರುನೋಡುತ್ತಾ, ಕೃಪೆಗೆ ಪಾತ್ರನಾದ ಆ ಅತಿಥಿಯಲ್ಲಿ, ಒರೆಗಲ್ಲಿನಲ್ಲಿಟ್ಟ ಸುವರ್ಣರೇಖೆಯಂತೆ ಸ್ಥಿರ

ವಾಗಿ ನೆಲಸಿರುವಳು. ಶೌರ್ಯರಹಿತವಾದ ನೀತಿಯು ಭಯವನ್ನುಂಟುಮಾಡು ವುದು, ನೀತಿರಹಿತವಾದ ಶೌರ್ಯವು ವ್ಯಾಘ್ರಾದಿ ಕ್ರೂರಜಂತುಗಳ ಚೇಷ್ಟೆ ಯಾಗುವುದು. ಆದಕಾರಣ ಆ ಅತಿಥಿಯು ಶೌರ್ಯನೀತಿಗಳೆರಡನ್ನೂ ಉಪ ಯೋಗಿಸಿ ಕಾರ್ಯಸಿದ್ಧಿಯನ್ನು ಪಡೆಯುತ್ತಿದ್ದನು. ಅತಿಥಿಯು ಗೂಢ ಚಾರರೆಂಬ ಕಿರಣಗಳನ್ನು ತನ್ನ ದೇಶದಲ್ಲೆಲ್ಲಾ ಪ್ರಸರಿಸಿದ್ದದ್ದರಿಂದ ಮೋಡವಿಂದ ಆವರಿಸದ ಸೂರ್ಯನಂತೆ ಆತನ ದೇಶದಲ್ಲಿ ಆತನು ಕಾಣದ ಸಂ ಗತಿಗಳೇ ಇರಲಿಲ್ಲ. "ರಾಜಾನಶ್ಚಾರಚಕ್ಷುಷಃ" ಎಂಬ ನೀತಿಯನ್ನನುಸ ರಿಸಿ ತನ್ನ ಕಣ್ಣುಗಳಂತಿರುವ ಗೂಢಚಾರರಿಂದ ಎಲ್ಲವನ್ನೂ ತಿಳಿಯುತ್ತಿ ದ್ದನು. ಹಗಲು ರಾತ್ರಿಗಳಲ್ಲಿ ಮಾಡಿರುವ ಕಾಲವಿಭಾಗಗಳಲ್ಲಿ ದೊರೆಯು ಯಾವಯಾವ ಕಾರ್ಯಗಳನ್ನು ಮಾಡಬೇಕೆಂದು ಮನ್ವಾದಿ ಸ್ಮೃತಿಗಳಲ್ಲಿ ಹೇಳಿದೆಯೋ ಅದೇಮೇರಿಗೆ ಅತಿಥಿಯು ರಾಜಕಾರ್ಯಗಳನ್ನು ಆಲಸ್ಯವಿಲ್ಲದೆ ಗೊತ್ತಾಗಿ ತಪ್ಪದೆ ನಡೆಯಿಸುತ್ತಿದ್ದನು. ಅವನು ಮಂತ್ರಿಗಳೊಡನೆ ಪ್ರತಿ ದಿನವೂ ಮಂತ್ರಾಲೋಚನೆಯನ್ನು ಮಾಡುತ್ತಿದ್ದನು, ಯಾವಾಗಲೂ ಆಲೋಚನೆಯನ್ನು ನಡೆಯಿಸುತ್ತಿದ್ದರೂ, ಆ ಭಾವಗಳು ಮುಖವಿಕಾ ರಾದಿಗಳಲ್ಲಿ ಕಾಣಬಾರದೆ ಇದ್ದುದರಿಂದ ಎಂದಿಗೂ ಯಾರಿಗೂ ಗೋಚರ ವಾಗದೆ, ಗೂಢವಾಗಿರುತ್ತಿತ್ತು. ಈ ಅತಿಥಿಯು ಕ್ಲುಪ್ತಕಾಲಕ್ಕೆ ಸರಿ ಯಾಗಿ ಮಲಗುತ್ತಿದ್ದರೂ, ಸ್ವಜನರಲ್ಲಿಯೂ, ಶತ್ರುಗಳಲ್ಲಿಯೂ ಮಂತ್ರಿ ಮೊದಲಾದ ಅಧಿಕಾರಿಗಳಲ್ಲಿಯೂ ಗುಟ್ಟಾಗಿ ಸಮಾಚಾರವನ್ನು ತಿಳಿದು ಬರಲು ಒಬ್ಬರಿಗೊಬ್ಬರು ತಿಳಿಯದಂತೆ ಕಳುಹಿಸಿದ್ದ ಬೇಹುಗಾರರನ್ನು ವಿಚಾರಿಸುವದಕ್ಕಾಗಿ ಎಚ್ಚರವಾಗಿಯೇ ಇರುತ್ತಿದ್ದನು. ಶತ್ರುಗಳನ್ನು ನಿರ್ಬಂಧದಲ್ಲಿಟ್ಟುಕೊಂಡಿದ್ದವನಾಗಿದ್ದರೂ, ಶತ್ರುಭಯವು ಸ್ವಲ್ಪವಾದರೂ ಇಲ್ಲದಿದ್ದರೂ, ಜಯಿಸುವುದಕ್ಕೆ ಸಾಧ್ಯವಾದ ಕೋಟೆಗಳನ್ನಿಟ್ಟುಕೊಂಡಿ ದ್ದನು, ಆದರೇನು? ಆನೆಗಳನ್ನು ಧ್ವಂಸಮಾಡುವ ಸಾಮರ್ಥ್ಯವುಳ್ಳ ಸಿಂ ಹವು ಗುಹೆಯಲ್ಲಿ ಮಲಗಿದ್ದಮಾತ್ರಕ್ಕೆ ಶತ್ರುಭೀತಿಯಿಂದ ಹೊಕ್ಕಿರುತ್ತ ದೆಂದು ಹೇಳುವುದಕ್ಕಾದೀತೆ? ಮಂಗಳಕರಗಳಾಗಿಯೂ, ಜಾಗರೂಕತೆ ಯಿಂದ ಸರಿಯಾದ ಪ್ರಯತ್ನಗಳನ್ನು ಮಾಡುತ್ತಿರುವುದರಿಂದ ನಿರುಪಾಧಿಕ ಗಳಾಗಿಯೂ ಇರುವ ಆ ಅತಿಥಿಯ ಕಾರ್ಯಗಳು – ಹೊಡೆಯಾದ ತೆನೆಗಳಲ್ಲಿ

ಬತ್ತದಕಾಳು ಬಲಿತು ಫಲವನ್ನು ಕೊಡುವಂತೆ ಗುಟ್ಟಾಗಿ ಫಲಕಾರಿಗಳಾಗುತ್ತಿದ್ದವು. ಸಮುದ್ರದಲ್ಲಿ ನೀರು ಎಷ್ಟೇಹೆಚ್ಚಿದರೂ ನದೀಮುಖಗಳ ಮಾರ್ಗವಾಗಿಯೇ ಹೊರಕ್ಕೆ ಬರುವುದಲ್ಲದೆ ಬೇರೆ ಮಾರ್ಗದಿಂದ ಹೇಗೆ ನುಗ್ಗುವುದಿಲ್ಲವೋ ಹಾಗೆ ಅತಿಥಿಯು ಎಷ್ಟು ಅಭಿವೃದ್ಧಿಯನ್ನು ಪಡೆದರೂ ಸನ್ಮಾರ್ಗಪ್ರವರ್ತಕನಾಗಿದ್ದನೇ ಹೊರತು ದುರ್ಮಾರ್ಗದಲ್ಲಿ ಪ್ರವರ್ತಿಸುತ್ತಿರಲಿಲ್ಲ. ಪ್ರಜೆಗಳು ಲೋಕವ್ಯವಹಾರಗಳಲ್ಲಿ ಅಭಿರುಚಿಯಿಲ್ಲದೆ ವೈರಾಗ್ಯವನ್ನು ಹೊಂದಿದರೂ ಆ ವೈರಾಗ್ಯವನ್ನು ತತ್ಕ್ಷಣದಲ್ಲಿಯೇ ಹೋಗಲಾಡಿಸುವ ಸಾಮರ್ಥ್ಯವುಳ್ಳವನಾದರೂ, ರಾಜ್ಯದ ಏಳಿಗೆಗೆ ಕುಂದನ್ನುಂಟುಮಾಡತಕ್ಕ ಆ ವೈರಾಗ್ಯವು ಪ್ರಜೆಗಳಲ್ಲಿ ತಲೆಹಾಕುವುದಕ್ಕೂ ಅವಕಾಶವಿಲ್ಲದಂತೆಮಾಡಿ ಎಲ್ಲರನ್ನೂ ಕುತೂಹಲವುಳ್ಳವರಾಗುವಹಾಗೆಮಾಡಿ ಪ್ರೋತ್ಸಾಹಪಡಿಸುತ್ತಿದ್ದನು. ಎಲ್ಲವನ್ನೂ ಸುಡುವ ಸಾಮರ್ಥ್ಯವುಳ್ಳ ಕಾಳ್ಕಿಚ್ಚು ತನಗೆ ವಾಯುವಿನ ಸಹಾಯವಿದ್ದರೂ ನೀರನ್ನೂ ಹೇಗೆ ಸುಡುವುದಕ್ಕೆ ಅಪೇಕ್ಷಿಸುವುದಿಲ್ಲವೋ ಹಾಗೆ ಈ ಅತಿಥಿಯು ಬಲಿಷ್ಠನಾದರೂ ತನಗಿಂತ ಹೀನಬಲರಲ್ಲಿ ದಂಡಯಾತ್ರೆಮಾಡುತ್ತಿದ್ದನೇ ಹೊರತು, ತನಗಿಂತ ಶಕ್ತಿವಂತರಮೇಲೆ ಯುದ್ಧಕ್ಕೆ ಹೋಗುತ್ತಿರಲಿಲ್ಲ, ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳಲ್ಲಿಯೂ, ಸಮಾನವಾದ ಪ್ರವೃತ್ತಿಯುಳ್ಳವನಾಗಿದ್ದನಾದ ಕಾರಣ ಅರ್ಥಕಾಮಗಳಿಂದ ಧರ್ಮಕ್ಕೂ, ಧರ್ಮದಿಂದ ಅರ್ಥಕಾಮಗಳಿಗೂ, ಕಾಮದಿಂದ ಅರ್ಥಕ್ಕೂ, ಅರ್ಥದಿಂದ ಕಾಮಕ್ಕೂ ಬಾಧೆಯುಂಟಾಗದಂತೆ ಇತ್ತು, ಮಿತ್ರರು ಹೀನಸ್ಥಿತಿಯಲ್ಲಿದ್ದರೆ ತನಗೆ ಅವರಿಂದ ಯಾವ ಸಹಾಯವೂ ದೊರೆಯಲಾರದು, ಉನ್ನತ ಸ್ಥಿತಿಯಲ್ಲಿದ್ದರೆ ತನ್ನೊಡನೆ ವಿರೋಧವನ್ನು ಬೆಳೆಯಿಸಿ ಅಪಕಾರಮಾಡುತ್ತಾರೆ. ಆದಕಾರಣ ಈ ಮರ್ಮವನ್ನುಬಲ್ಲ ಆ ಅತಿಥಿಯುಮಧ್ಯಮಸ್ಥಿಯಲ್ಲಿರತಕ್ಕವರನ್ನೇ ತನಗೆ ಮಿತ್ರರನ್ನಾಗಿಮಾಡಿಕೊಳ್ಳುತ್ತಿದ್ದನು. ಶಕ್ತಿ, ದೇಶ, ಕಾಲ ಮೊದಲಾದವುಗಳಿಂದ ತನಗೂ ಶತ್ರುವಿಗೂ ಇರುವ ಬಲಾಬಲಗಳನ್ನು ನಿಶ್ಚಯಿಸಿ,ಶತ್ರುವಿಗಿಂತ ತಾನು ಬಲಿಷ್ಠನಾಗಿ ತೋರಿದರೆ ದಂಡಯಾತ್ರೆ ಮಾಡುತ್ತಿದ್ದನು. ಇಲ್ಲದಿದ್ದರೆ ಸುಮ್ಮನಾಗುತ್ತಿದ್ದನು. ತನ್ನನ್ನು ಎಲ್ಲರೂ ಆಶ್ರಯಿಸಿಕೊಂಡಿರಬೇಕೆಂಬ ಭಾವನೆಯಿಂದ ಭಂಡಾರವನ್ನು ಹೆಚ್ಚಿಸುತ್ತಿದ್ದ

ನೇಹೊರತು ದುರಾಶೆಯಿಂದಲ್ಲ. ತಮಗೆ ಜೀವನವಾದ ನೀರನ್ನು ಇಟ್ಟು ಕೊಂಡಿರುವುದರಿಂದಲ್ಲವೇ ಚಾತಕಗಳು ಮೇಘಗಳನ್ನು ಸೇವಿಸುತ್ತವೆ! ಶತ್ರುಗಳು ಯುದ್ಧಾನುಕೂಲಕ್ಕಾಗಿ ಮಾಡಿಕೊಳ್ಳುತ್ತಿರುವ ಸೇತುಬಂಧನ ವಾರ್ತಾಶ್ರವಣ ಮೊದಲಾದಕಾರ್ಯಗಳಿಗೆ ವಿಘಾತವನ್ನುಂಟುಮಾಡಿ ಸ್ವಕಾರ್ಯದಲ್ಲಿ ಸಂಪೂರ್ಣಪ್ರಯತ್ನವನ್ನು ಮಾಡುತ್ತಿದ್ದನು. ಶತ್ರುಗಳಲ್ಲಿ ರಂಧ್ರಾನ್ವೇಷಣೆಮಾಡುತ್ತಾ ತನ್ನ ನ್ಯೂನತೆಯನ್ನು ಶತ್ರುಗಳಿಗೆ ಗೋಚರವಾಗದಂತೆ ನೋಡಿಕೊಳ್ಳುತ್ತಿದ್ದನು. ದಂಡನೀತಿಜ್ಞನಾದ ಆ ಅತಿಥಿಯು ಪ್ರತಿನಿತ್ಯವೂ ತಮ್ಮ ತಂದೆಯಿಂದ ಪೋಷಣೆಯನ್ನು ಹೊಂದಿದ್ದಾಗಿಯೂ, ಶಸ್ತ್ರವಿದ್ಯೆಯಲ್ಲಿ ಸಮರ್ಥವಾಗಿಯೂ, ಯುದ್ಧಕ್ಕೆ ಸಿದ್ಧವಾಗಿಯೂ ಇರುವ ತನ್ನ ಸೈನ್ಯವನ್ನು ತನ್ನ ದೇಹದಂತೆಯೇ ಭಾವಿಸಿದ್ದನೇಹೊರತು ಬೇರಾಗಿ ತಿಳಿಯಲಿಲ್ಲ. ಈ ಅತಿಥಿಯಲ್ಲಿರುವ ಶಕ್ತಿತ್ರಯಗಳನ್ನು ಸರ್ಪದತಲೆಯಲ್ಲಿರುವ ರತ್ನದಂತೆ ಇತರರು ಅಪಹರಿಸಲಾರರು. ಶತ್ರುಗಳ ಶಕ್ತಿತ್ರಯವನ್ನು ಇವನು ಸೂಜಿಕಲ್ಲು ಕಬ್ಬಿಣವನ್ನು ಸೆಳೆಯುವಂತೆ ಎಳೆಯುತ್ತಿದ್ದನು, ಇವನ ದೇಶದಲ್ಲಿರುವ ವರ್ತಕರು ಬಾವಿಗಳಮೇಲೆ ಸಂಚರಿಸುವಂತೆ ನದಿಗಳಲ್ಲಿಯೂ ಉಪವನಗಳಂತೆ ಕಾಡುಗಳಲ್ಲಿಯೂ, ಮನೆಗಳಂತೆ ಬೆಟ್ಟಗಳಲ್ಲಿಯೂ, ವ್ಯಾಪಾರಕ್ಕಾಗಿ ನಿರ್ಭಯವಾಗಿ ಸಂಚರಿಸುತ್ತಿದ್ದರು. ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳುಳ್ಳ ತಪಸ್ವಿಗಳ ತಪಸ್ಸನ್ನೂ ಬ್ರಾಹ್ಮಣಾದಿ ನಾಲ್ಕುವರ್ಣಗಳುಳ್ಳ ಪ್ರಜೆಗಳಲ್ಲಿನದ್ರವ್ಯವನ್ನೂ, ಬಾಧೆಯಿಲ್ಲದೆ ಸಂರಕ್ಷಣೆ ಮಾಡುತ್ತಾ ಆ ತಪಸ್ಸಿನ ಮತ್ತು ಆ ದ್ರವ್ಯದ ಆರನೆಯ ಒಂದುಭಾಗಕ್ಕೆ ತಾನು ಭಾಗಿಯಾಗಿದ್ದನು. ಭೂಮಿಯು ಆತನು ಮಾಡಿದ ರಕ್ಷಣೆಗನುಸಾರವಾಗಿ, ಗಣಿಗಳಿಂದ ರತ್ನಗಳನ್ನೂ, ಕ್ಷೇತ್ರಗಳಿಂದ ಧಾನ್ಯವನ್ನೂ ವನಗಳಿಂದ ಆನೆಗಳನ್ನೂ ವೇತನವಾಗಿ ಕೊಡುತ್ತಿತ್ತು. ಆ ಅತಿಥಿಯುಸಾಧಿಸಬೇಕಾದ ಕಾರ್ಯಗಳಲ್ಲಿ ತನಗಿರುವ ಸಂಧಿ, ವಿಗ್ರಹಾದಿಷಡ್ಗುಣಗಳನ್ನೂ, ಮೂಲಭೃತ್ಯಾದಿ ಷಡ್ಬಲಗಳನ್ನೂ, ಆಯಾ ಸಂದರ್ಭಕ್ಕನುಸಾರವಾಗಿ ಯಾವಯಾವದನ್ನು ಉಪಯೋಗಿಸಬೇಕೋ ಅದನ್ನೇ ಪ್ರಯೋಗಿಸುತ್ತಿದ್ದನು. ಈ ಪ್ರಕಾರ ಕ್ರಮವಾಗಿ ಸಾಮದಾನಭೇದದಂಡಗಳೆಂಬ ನಾಲ್ಕು ಉಪಾಯಗಳನ್ನೂ ದಂಡನೀತಿಗನುಸಾರವಾಗಿ ಪ್ರಯೋಗಿಸುತ್ತಿದ್ದದ್ದ

ರಿಂದ ಮಂತ್ರಿಮೊದಲಾದ ಹದಿನೆಂಟುಮಂದಿ ಅಧಿಕಾರಿಗಳವರೆಗೂ ಆನೀತಿಗೆ ತಡೆಯಿಲ್ಲದೆ ಫಲವನ್ನು ಹೊಂದುತ್ತಿದ್ದನು. ಆ ಅತಿಥಿಯು ಕಪಟಯುದ್ಧ ವನ್ನು ಬಲ್ಲವನಾದರೂ ನ್ಯಾಯಮಾರ್ಗದಿಂದ ಯುದ್ಧಮಾಡುತ್ತಿದ್ದನು. ಜಯಲಕ್ಷ್ಮಿಯು ವೀರನನ್ನೇ ಸೇರುವ ಸ್ವಭಾವವುಳ್ಳವಳಾದುದರಿಂದ ಅಭಿ ಸಾರಿಕೆಯಾಗಿ ಇವನನ್ನು ಹುಡುಕಿಕೊಂಡುಬಂದು ಸೇರುತ್ತಿದ್ದಳು. ಶತ್ರು ಗಳೆಲ್ಲರೂ ಇವನ ಪ್ರತಾಪದಿಂದಲೇ ಭಗ್ನರಾಗಿ ಹೋಗುತ್ತಿದ್ದುದರಿಂದ, ಮತ್ತಗಜನ ಮದಗಂಧದಿಂದಲೇ ಭಗ್ನಗಳಾಗಿರುವ ಶತ್ರುಗಜಗಳೊಡನೆ ಮದಗಜಕ್ಕೆ ಯುದ್ಧ ಪ್ರಸಕ್ತಿಯೇ ಇಲ್ಲದಿರುವಂತೆ ಅತಿಥಿಗೆ ಶತ್ರುಗಳೊ ಡನೆ ಯುದ್ಧವು ಲಭಿಸುವುದೇ ಅಪೂರ್ವವಾಗಿದ್ದಿತು. ಚಂದ್ರನೂ, ಸಮು ದ್ರನೂ ಅಭಿವೃದ್ಧಿಯನ್ನು ಹೊಂದಿದಕೂಡಲೆ ಕ್ಷೀಣತೆಯನ್ನು ಪಡೆವರು, ಈ ಅತಿಥಿಯು ಹಾಗೆಯೇ ಅಭಿವೃದ್ಧಿಯನ್ನು ಪಡೆದರೂ ಅವರಂತೆ ಕ್ಷೀಣ ನಾಗದೆ ಅಭಿವೃದ್ಧನಾಗಿಯೇ ಇರುತ್ತಿದ್ದನು. ಬಹಳ ದರಿದ್ರರಾಗಿರುವ ಯಾಚಕರು ಅತಿಥಿಯ ಬಳಿಗೆ ಹೋಗಿ, ಸಮುದ್ರದ ಬಳಿಗೆ ಬಂದ ಮೇಘ ಗಳಂತೆ ಅವನ ಸಂಪೂರ್ಣದಾತೃಭಾವಕ್ಕೆ ಪಾತ್ರರಾಗುತ್ತಿದ್ದರು,ಸ್ತೋತ್ರಾ ರ್ಹವಾದ ಕಾರ್ಯಗಳನ್ನೇ ಮಾಡುತ್ತಿರುವನಾದುದರಿಂದ ಅನೇಕರು ಹೊಗ ಳುತ್ತಿದ್ದರು. ಅದರಿಂದ ಲಜ್ಜೆಪಟ್ಟು ಸ್ತುತಿಮಾಡುವವರನ್ನು ಅವನು ದ್ವೇಷಿ ಸುತ್ತಿದ್ದರೂ, ಆತನ ಕೀರ್ತಿಯು ಮತ್ತಷ್ಟು ಹೆಚ್ಚುತ್ತಿತ್ತು, ಪ್ರಜೆಗಳಿಗೆ ದರ್ಶನಮಾತ್ರದಿಂದ ಪಾತಕಗಳನ್ನು ಪರಿಹರಿಸುತ್ತಲೂ, ಶಿಕ್ಷೆಯಿಂದ ವಸ್ತುಜ್ಞಾನವನ್ನುಂಟುಮಾಡೋಣವರಿಂದ ಅಂಧಕಾರ ಸದೃಶವಾದ ಅಜ್ಞಾನ ವನ್ನು ನಾಶಮಾಡುತ್ತಲೂ, ಇರುವುದರಿಂದ ಅವರಿಗೆ ಸ್ವಾತಂತ್ರ್ಯವನ್ನು ಕಲ್ಪಿಸಿದನು. ಚಂದ್ರನ ಗುಣಗಳು ಕಮಲಗಳಲ್ಲಿಯೂ, ಸೂರ್ಯನ ಗುಣ ಗಳು ನೈದಿಲೆಗಳಲ್ಲಿಯೂ, ಪ್ರವೇಶಿಸಿ ಹಿತವನ್ನುಂಟುಮಾಡಲಾರವು. ಅತಿ ಥಿಯ ಗುಣಗಳು ಮಿತ್ರರಲ್ಲಿಯೂ, ಶತ್ರುಗಳಲ್ಲಿಯೂ ಹೃದಯಂಗಮವಾ ಗುತ್ತಿದ್ದವು. ಅಶ್ವಮೇಧಕ್ಕಾಗಿ ದಿಗ್ವಿಜಯವನ್ನಪೇಕ್ಷಿಸಿ ಮಾಡಿದ ಇವನ ಪ್ರಯತ್ನಗಳು ಪ್ರಾಯಶಃ ಪರರನ್ನು ವಂಚಿಸುವುದಕ್ಕಾಗಿಯೇ ಆಗಿದ್ದರೂ ಅದು ಅಧರ್ಮ ಪ್ರವರ್ತನೆಯಾಗಲಿಲ್ಲ, ಹೀಗೆ ಶಾಸ್ತ್ರೋಕ್ತವಾದ ಮಾರ್ಗ ದಿಂದ. ಪ್ರತಾಪದೊಡನೆ ಪ್ರಯತ್ನಿಸುತ್ತಿರುವ ಅತಿಥಿಯು, ಇಂದ್ರನು

ದೇವತೆಗಳಿಗೆ ದೇವನಾಗಿರುವಂತೆ, ರಾಜರಿಗೆ ರಾಜನಾಗಿದ್ದನು. ಈ ಅತಿಥಿಯಲ್ಲಿ ಲೋಕಪಾಲಕರಲ್ಲಿರುವ ಲೋಕರಕ್ಷಣ ಶಕ್ತಿಯೂ, ಪಂಚಭೂತಗಳಲ್ಲಿರುವ ಪರೋಪಕಾರ ಶಕ್ತಿಯೂ, ಕುಲಪರ್ವತಗಳಲ್ಲಿರುವ ಭೂಭಾರಧಾರಣಶಕ್ತಿಯೂ, ಇದ್ದುದರಿಂದ ಇವನನ್ನು ಐದನೆಯಲೋಕಪಾಲಕನೆಂತಲೂ, ಆರನೆಯ ಭೂತವೆಂತಲೂ, ಎಂಟನೆಯ ಕುಲಪರ್ವತವೆಂತಲೂ ಹೇಳುವರು. ಅತಿಥಿಯು ಬರೆದು ಕಳುಹಿಸಿದ ಶಾಸನಪತ್ರಿಕೆಯನ್ನು ರಾಜರೆಲ್ಲರೂ, ಇಂದ್ರನ ಆಜ್ಞೆಯನ್ನು ದೇವತೆಗಳು ಹೇಗೋ ಹಾಗೆ, ತಮ್ಮ ಛತ್ರಗಳನ್ನು ದೂರವಾಗಿಟ್ಟು ಶಿರಸಾವಹಿಸುತ್ತಿದ್ದರು. ಧನದ, ಎಂದರೆ ಧನವನ್ನು ಕೊಡುವವನು ಎಂಬ ಹೆಸರು ಕುಬೇರನಿಗೂ ತನಗೂ ಸಮಾನವಾಗಿರುವಂತೆ, ಅಶ್ವಮೇಧ ಯಾಗದಲ್ಲಿ ಋತ್ವಿಕ್ಕುಗಳಿಗೆ ದಾನದಕ್ಷಿಣೆಗಳನ್ನು ಕೊಟ್ಟನು. ಇಂದ್ರನು ಅತಿಥಿಯ ರಾಜ್ಯದಲ್ಲಿ ಸರಿಯಾಗಿ ಮಳೆಗರೆಸುತ್ತಿದ್ದನು. ಯಮನು ಪ್ರಜೆಗಳಿಗೆ ರೋಗಾದ್ಯುಪದ್ರವಗಳನ್ನುಂಟುಮಾಡುತ್ತಿರಲಿಲ್ಲ, ವರುಣನು ನಾವಿಕರ ಸಂಚಾರಕ್ಕೆ ಅನುಕೂಲವಾಗಿ ಜಲಮಾರ್ಗಗಳನ್ನು ಸರಿಮಾಡಿಕೊಂಡಿರುವನು. ಕುಬೇರನು ಈ ಅತಿಥಿಯು ಪೂರ್ವ್ವ ರಾಜರಾದ ರಾಮಾದಿಗಳನ್ನು ಸ್ಮರಿಸಿಕೊಂಡು ಇವನ ಕೋಶವೃದ್ಧಿಯನ್ನುಂಟುಮಾಡುತ್ತಿದ್ದನು. ಈ ಪ್ರಕಾರವಾಗಿ ಲೋಕಪಾಲಕರೂ ಕೂಡ ಇವನಲ್ಲಿ ಶರಣಾಗತರಂತೆ ನಡೆದು ಕೊಳ್ಳುತ್ತಿದ್ದರೆಂಬಲ್ಲಿಗೆ

ಹದಿನೇಳನೆಯ ಸರ್ಗವು ಮುಗಿದುದು.

ಓಂ ಪರಮಾತ್ಮನೇನಮಃ.

# ಹದಿನೆಂಟನೆಯ ಅಧ್ಯಾಯಂ.

ಕಂ॥ ಅತಿಥಿಮೊದಲಾಗೆ ಪೃಥ್ವೀ ।
ಪತಿಗಳ್ಕೆಲಬ ಸುದರ್ಶನಾಖ್ಯಂಬರೆಗಂ॥
ಕ್ಷಿತಿಯಂ ಪರಿಪಾಲಿಸುತಂ ।
ವಿತತಮೆನಿಪ್ಪಮಳಕೀರ್ತಿಯಂ ತಳೆದೆಸೆದರ್ ॥

ಅತಿಥಿಯು-ನಿಷಧ ರಾಜನಾದ ಅರ್ಥಪತಿ ಎಂಬುವನ ಮಗಳನ್ನು ಮದುವೆಮಾಡಿಕೊಂಡು ಆಕೆಯಲ್ಲಿ ನಿಷಧ ಪರ್ವತಕ್ಕೆ ಸಮಾನವಾದ ಬಲವುಳ್ಳ ನಿಷಧನೆಂಬ ಪುತ್ರನನ್ನು ಪಡೆದನು. ಮುಂದೆ ಪ್ರಜಾರಕ್ಷಣೆಗೆ ಯೋಗ್ಯನಾಗಿಯೂ, ಮಹಾ ಪರಾಕ್ರಮಿಯಾಗಿಯೂ, ಯೌವನಸ್ಥನಾಗಿಯೂ ಇರುವ ನಿಷಧನನ್ನು ನೋಡಿ, ತಂದೆಯು- ಸುವೃಷ್ಟಿಯ ಪಸೆಯಿಂದ ಸಂಪೂರ್ಣವಾಗಿ ಫಲಿಸಿರುವ ಸಸ್ಯವನ್ನು ಕಂಡ ಜನದಂತೆ ಹರ್ಷಗೊಳ್ಳುತ್ತಿದ್ದನು, ಅತಿಥಿಯು- ಬಹುಕಾಲದಿಂದ ವಿಷಯಸುಖವನ್ನು ಅನುಭವಿಸಿ, ತನ್ನ ಪುತ್ರನಿಗೆ ರಾಜ್ಯಾಭಿಷೇಕವನ್ನು ಮಾಡಿ, ತಾನು ಮಾಡಿದ ಅಶ್ವಮೇಧಾದಿ ಸತ್ಕರ್ಮಗಳಿಂದ ಸಂಪಾದಿಸಿದ್ದ ಸ್ವರ್ಗಲೋಕವನ್ನೈದಿದನು. ಕುಶನ ಮೊಮ್ಮಗನಾದ ನಿಷಧನು, ಅದ್ವಿತೀಯನಾಗಿಯೂ, ಸಮುದ್ರದಂತೆ ಗಂಭೀರನಾಗಿಯೂ, ಆಜಾನು ಬಾಹುವಾಗಿಯೂ ಇದ್ದು, ಚತುಸ್ಸಮುದ್ರಮುದ್ರಿತವಾದ ಭೂಮಂಡಲವನ್ನು ಏಕಚ್ಛತ್ರಾಧಿಪತ್ಯದಿಂದ ಆಳುತ್ತಿದ್ದನು. ನಿಷಧನ ತರುವಾಯ ಅಗ್ನಿಯಂತೆ ತೇಜಸ್ವಿಯಾದ ನಲನೆಂಬ ಅವನ ಪುತ್ರನು ರಾಜನಾದನು. ಅವನು ಶತ್ರುಗಳ ಬಲವನ್ನು ಆನೆಗಳು ಹುಲ್ಲುಗಾವಲನ್ನು ತುಳಿದು ಹಾಕುವಂತೆ ಮುರಿದುಹಾಕಿದನು. ಆ ನಳನು ನಭಶ್ಚರರಿಗೆ ಸ್ತೋತ್ರಪಾತ್ರನಾಗಿಯೂ, ನಭಸ್ಯ ಮಾಸದಂತೆ ಶ್ಯಾಮಲಗಾತ್ರನಾಗಿಯೂ ಇರುವ ನಭಸ್ಸೆಂಬ ಪುತ್ರನನ್ನು, ಪ್ರಜೆಗಳು ಮನೋಹರವಾದ ನಭೋಮಾಸವನ್ನು ಪಡೆವಂತೆ ಪಡೆದನು, ಧರ್ಮಾತ್ಮನಾದ ನಳನು

ಸಮರ್ಥನಾದ ನಭೋರಾಜನಿಗೆ ಉತ್ತರ ಕೋಸಲ ರಾಜ್ಯವನ್ನು ಕೊಟ್ಟು ಮುಪ್ಪಿನಲ್ಲಿ ಮಾಡಬೇಕಾದ ಕಾರ್ಯವನ್ನು ನೆರವೇರಿಸುವುದಕ್ಕಾಗಿ, ಮೃಗಗಳಿಂದ ವ್ಯಾಪ್ತವಾದ ಅರಣ್ಯವನ್ನು ಪ್ರವೇಶಿಸಿ, ಪುನರ್ಜನ್ಮವಿಲ್ಲದಂತೆ ಮಾಡಿಕೊಳ್ಳಲು ತಪಸ್ಸನ್ನು ಮಾಡಲು ಉಪಕ್ರಮಿಸಿದನು. ಗಜಗಳಲ್ಲಿ ಶ್ರೇಷ್ಠವಾದ ಪುಂಡರೀಕನೆಂಬ ಗಜದಂತೆ, ಆನಭಸ್ಸಿಗೆ ಅಜಯ್ಯನಾದ ಪುಂಡರೀಕನೆಂಬ ಮಗನುಹುಟ್ಟಿನು, ನಭಸ್ಸು ಲೋಕಾಂತರವನ್ನೈದಲು ಪುಂಡರೀಕಹಸ್ತೆಯಾದ ಲಕ್ಷ್ಮಿಯು ಪುಂಡರೀಕಾಕ್ಷನನ್ನು ಆಶ್ರಯಿಸಿದಂತೆ ಇವನನ್ನು ಸೇರಿದಳು. ಈ ಪುಂಡರೀಕನು ಕ್ಷಮಾಯುಕ್ತನಾಗಿಯೂ, ಪ್ರಜಾರಕ್ಷಣೆಯಲ್ಲಿ ದಕ್ಷನಾಗಿಯೂ, ಇರುವ ಕ್ಷೇಮಧನ್ವನೆಂಬ ತನ್ನಪುತ್ರನನ್ನು, ರಾಜ್ಯದಲ್ಲಿ ನೆಲೆಗೊಳಿಸಿ, ವನ ಪ್ರವೇಶಮಾಡಿ ಕ್ಷಾಂತಿಯುಕ್ತನಾಗಿ ತಪಸ್ಸನ್ನು ಮಾಡುತ್ತಿದ್ದನು. ಕ್ಷೇಮಧನ್ವನಿಗೆ ಅನೀಕಿನಿಯ ಅಗ್ರೇಸರನಾಗಿಯೂ ದೇವತೆಗಳಿಗೆ ಸನ್ಮತನಾದುದರಿಂದ ದೇವಲೋಕದಲ್ಲಿಯೂ ಪ್ರಖ್ಯಾತಿಯಂ ಪಡೆದವನಾಗಿಯೂ ಇರುವ ದೇವಾನೀಕನೆಂಬ ಪುತ್ರನು ಹುಟ್ಟಿದನು. ಕ್ಷೇಮಧನ್ವನು ಪಿತೃಶುಶ್ರೂಷಾಪರನಾದ ದೇವಾನೀಕನೆಂಬ ಸುಪುತ್ರನಾಪಡೆದುದರಿಂದ ಪುತ್ರವಂತನೆಂತಲೂ, ದೇವಾನೀಕನು ಪುತ್ರವಾತ್ಸಲ್ಯವುಳ್ಳ ಕ್ಷೇಮಧನ್ವನೆಂಬ ತಂದೆಯುಳ್ಳವನಾದುದರಿಂದ ಪಿತೃಮಂತನೆಂತಲೂ ಪ್ರಸಿದ್ಧರಾದರು. ಪುತ್ರತ್ವ, ಪಿತೃತ್ವಗಳು ಇವರಿಬ್ಬರಲ್ಲಿಯೇ ಶೋಭಿಸಿದಂತಿತ್ತು. ಗುಣಾನುರಾಗಿಯೂ, ಯಥಾವಿಧಿಯಾಗಿ ಅನೇಕಯಜ್ಞಗಳನ್ನು ಮಾಡಿದವನಾಗಿಯೂ ಇರುವ ಕ್ಷೇಮಧನ್ವನು ತನಗೆ ಸಮಾನವಾದ ಸಾಮರ್ಥ್ಯವುಳ್ಳ ತನ್ನಪುತ್ರನಿಗೆ ಬಹುಕಾಲದಿಂದ ತಾನುವಹಿಸಿದ್ದ ರಾಜ್ಯಭಾರವನ್ನು ಕೊಟ್ಟು ತಾನು ಸ್ವರ್ಗಕ್ಕೆ ತೆರಳಿದನು. ಸಮರ್ಥನಾದ ದೇವಾನೀಕನ ಮಗನಾದ ಅಹೀನಗು ಎಂಬುವನು ಆದರಪೂರ್ವಕವಾದ ಹಿತವಚನಗಳನ್ನೇ ಆಡುತ್ತಿದ್ದುದರಿಂದ ಮಿತ್ರರಂತೆಯೇ ಶತ್ರುಗಳೂ ಇವನಲ್ಲಿ ಭೀತಿಯಿಲ್ಲದೆ, ಇಷ್ಟವುಳ್ಳವರಾಗಿದ್ದರು. ಜಿಂಕೆಗಳು ಇಂಪಾದಸಂಗೀತ ಧ್ವನಿಗೆ ಮೊದಲು ಹೆದರುವವರೂ ತರುವಾಯ ಬಾಯುಸುತ್ತ ಕೊಳ್ಳಲು ಸುಲಭವಾಗಿ ಹಿಡಿಯಬಹುವಲ್ಲವೇ? ಮಹಾಭುಜಪರಾಕ್ರಮಿಯಾದ ಅಹೀನಗುವು ನೀಚಸಹವಾಸ ಪರಾಙ್ಮುಖನಾಗಿದ್ದ ಕಾರಣ, ಯೌವನಾವಸ್ಥನಾದರೂ

ದ್ಯೂತಪಾನಾದಿ ದುರ್ವ್ಯಸನಗಳಿಂದುಂಟಾಗುವ ಅನರ್ಥ ಪರಂಪರೆಗಳಿಗೆದೂರನಾಗಿ ಭೂಮಂಡಲವನ್ನು ರಕ್ಷಿಸಿದನು.

ಇಂಗಿತಜ್ಞನಾಗಿಯೂ, ಮಹಾಚತುರನಾಗಿಯೂ, ಭೂಲೋಕದಲ್ಲಿವತರಿಸಿರುವ ವಿಷ್ಣುವೋ ಎಂಬಂತೆಯೂ ಇರುವ ಅಹೀನಗುವು ತನ್ನ ತಂದೆಯ ತರುವಾಯರಾಜ್ಯಕ್ಕೆಬಂದುಸಾಮಾದಿನಾಲ್ಕು ಉಪಾಯಗಳನ್ನೂ, ನಿರರ್ಗಳವಾಗಿ ಉಪಯೋಗಿಸುತ್ತಾ ನಾಲ್ಕುದಿಕ್ಕುಗಳಿಗೂ ತಾನೇ ಅಧಿಪತಿಯಾಗಿದ್ದನು. ಈತನುಪರಲೋಕವನ್ನೈದಿದ ಬಳಿಕ, ಪಾರಿಯಾತ್ರಪರ್ವದಂತೆ ಉನ್ನತವಾದ ಶಿರಸ್ಸುಳ್ಳವನಾಗಿಯೂ, ಶತ್ರುಸಂಹಾರಕನಾಗಿಯೂ, ಇರುವ ಅವನಮಗನಾದ ಪಾರಿಯಾತ್ರನಿಗೆ ರಾಜ್ಯಾಭಿ ಷೇಕವಾಯ್ತು, ಅವನ ತರುವಾಯ, ದಯಾಪರನಾಗಿಯೂ, ವಿಶಾಲಾಕ್ಷನಾಗಿಯೂ, ಕುಂದಪುಷ್ಪದಂತೆ ಶುಭ್ರವರ್ಣವುಳ್ಳವನಾಗಿಯೂ, ಅರಿಮಾತಂಗ ಸಿಂಹನಾಗಿಯೂ ಕುಲಪಾತಕನಾಗಿಯೂ ಇರುವ ದಳನೆಂಬುವನು ಅರಸನಾದನು, ಅವನಿಗೆ ಉದಾರನಾಗಿಯೂ,ಶಿಲಾಪಟ್ಟದಂತೆ ವಿಶಾಲವಾದ ವಕ್ಷಸ್ಥಳವುಳ್ಳವನಾಗಿಯೂ ಇರುವ ಶಿಲನೆಂಬುವನು ಪುತ್ರನಾದನು.ಅವನು ರಾಜ್ಯಾಧಿಕಾರವನ್ನು ಪಡೆದು ಬಾಣಗಳಿಂದ ಶತ್ರುಗಳನ್ನು ಸಂಹರಿಸಿ ಹೊಗಳಿಕೆಯನ್ನು ಪಡೆದು ಸಾಧುವೆನ್ನಿಸಿ ಕೊಂಡಿದ್ದನು. ಇವನಿಗೆ ಯೌವರಾಜ್ಯಪದವಿಯನ್ನು ವಹಿಸಿ ಇವನ ತಂದೆಯು ನಿರಾತಂಕದಿಂದಸುಖವನ್ನನುಭವಿಸುತ್ತಿದ್ದನು. ರಾಜ್ಯಭಾರವನ್ನು ವಹಿಸಿರುವ ಕಾಲದಲ್ಲಿ ಪ್ರಜಾಪಾಲನಾದಿ ರೂಪಕಾರ್ಯಗಳುಸುಖಪ್ರತಿಬಂಧಕಗಳಾಗಿರುವುವು. ಆದಕಾರಣ ಆಗಿನವ್ಯಾಪಾರಗಳುಕಾರಾಗೃಹಾದಿಗಳಂತೆ ಪ್ರತಿಬಂಧಕಗಳಾಗಿರುವುವು. ಭಾರವನ್ನು ಹೊತ್ತುಕೊಂಡಿರುವವನಿಗೆ ಸುಖವೆಲ್ಲಿಯದು? ಅನುರಾಗವನ್ನುಂಟು ಮಾಡುವ ಇಂದ್ರಿಯ ಸುಖದಲ್ಲಿ ತೃಪ್ತನಾಗಿದ್ದರೂ, ಸ್ತ್ರೀಯರ ಸೌಂದರ್ಯಾತಿಶಯದಿಂದ ವಿಷಯೋಪಭೋಗಗಳನ್ನೂ ಅಪೇಕ್ಷಿಸುತ್ತಿದ್ದನು. ಜರೆಯು ರತಿಗೆ ಸಮರ್ಥಳಲ್ಲದಿದ್ದರೂ ವೃಥಾಮಾತ್ಸರ್ಯವುಳ್ಳವಳಾಗಿ ಅವನನ್ನು ವಶಮಾಡಿಕೊಂಡಳು. ಶಿಲನಿಗೆ ರಾಜಕುಲಪ್ರಧಾನನಾಗಿಯೂ ಮಹಾವಿಷ್ಣುವಿಗೆ ಸಮಾನನಾಗಿಯೂ, ಉನ್ನತನಾಭಿಯಾಗಿಯೂ ಇರುವ ಉನ್ನಾಭನೆಂಬ ಮಗನು ಹುಟ್ಟಿದನು ಅವನ ತರುವಾಯ ಮಹೇಂದ್ರಸದೃಶನಾಗಿಯೂ, ಯುದ್ಧದಲ್ಲಿ ಸಿಡಿಲಿನಂತೆ ಸಿಂಹನಾದ ಮಾಡುವವನಾಗಿಯೂ, ಇರುವ ಅವನಮಗನಾದ

ವಜ್ರನಾಭನು ದೊರೆಯಾದನು, ಇವನೂ ಕೂಡ ತನ್ನ ಧರ್ಮಗಳಿಂದ ಆರ್ಜನೆ ಮಾಡಿದ್ದ ಪುಣ್ಯಲೋಕವನ್ನು ಸೇರಲು, ಚತುಸ್ಸಮುದ್ರ ಪರಿವೃತವಾದಭೂಮಿಯು ಗಣಿಗಳಲ್ಲಿರುವ ಅಮೂಲ್ಯವಾದ ರತ್ನಗಳ ಕಾಣಿಕೆಯನ್ನುಕೊಟ್ಟು ಅವನ ಪುತ್ರನಾದ ಶಂಖಣನನ್ನು ಸೇವಿಸಿತು. ಅವನ ತರುವಾಯ ಸೂರ್ಯನಿಗೆ ಸಮಾನವಾದ ಕಾಂತಿಯುಳ್ಳವನಾಗಿಯೂ, ಅಶ್ವಿನೀದೇವತೆಗಳಂತೆ ರೂಪ ಸಂಪನ್ನನಾಗಿಯೂ ಇದ್ದವ್ಯುಷಿತಾಶ್ವನೆಂಬುವನು ರಾಜ್ಯಭಾರವನ್ನು ವಹಿಸಿದನು. ಸಮುದ್ರದಲ್ಲಿ ಸೇನೆಯನ್ನೂ ಕುದುರೆಗಳನ್ನು ಇಟ್ಟುಕೊಂಡಿದ್ದನಾದದುರಿಂದ ಇವನಿಗೆ ವ್ಯುಷಿತಾಶ್ವನೆಂಬುದು ಅನ್ವರ್ಥನಾಮವಾಯ್ತೆಂದು ಹಿರಿಯರು ಹೇಳುವರು, ಆ ವ್ಯುಷಿತಾಶ್ವನುಪುತ್ರಾರ್ಥಿಯಾಗಿ ಕಾಶೀವಿಶ್ವೇಶ್ವರನನ್ನಾರಾಧಿಸಿ, ತನ್ನರೂಪವೇ ಆಗಿರುವ, ಭೂಮಂಡಲವನ್ನೆಲ್ಲವನ್ನೂ ರಕ್ಷಣೆಮಾಡುವ ಸಾಮರ್ಥ್ಯವುಳ್ಳ, ಸರ್ವಪ್ರಿಯನಾದ, ವಿಶ್ವಸಹನೆಂಬ ಪುತ್ರನಂಪಡೆದನು. ಆವಿಶ್ವಸಹನಿಗೆ ವಿಷ್ಣುವಿನ ಅಂಶದಿಂದ ಹಿರಣ್ಯನಾಭನೆಂಬ ಮಗನು ಹುಟ್ಟಿದನು, ನೀತಿವಿಶಾರದನಾದ ಆವಿಶ್ವಸಹನು ವೃಕ್ಷಗಳಿಗೆ ವಾಯುಸಹಾಯಕನಾದ ಅಗ್ನಿಯೋಪಾದಿಯಲ್ಲಿ ಶತ್ರುಗಳಿಗೆ ಅಸಹ್ಯನಾಗಿದ್ದನು. ಇವನ ಪ್ರತಾಪವನ್ನು ಅವರು ತಡೆಯಲಾರದೆ ಹೋದರು. ಪುತ್ರಲಾಭದಿಂದ ಪಿತೃಋಣ ವಿಮುಕ್ತನಾದ ವಿಶ್ವಸಹನು- ತನ್ನ ಚರಮವಯಸ್ಸಿನಲ್ಲಿ ಶಾಶ್ವತ ಸುಖವನ್ನು ಪಡೆಯುವುದಕ್ಕೆ, ಆಜಾನುಲಂಬ ಬಾಹುವಾದ ತನ್ನ ಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ,ಕೃತಕೃತ್ಯನಾಗಿ ತಪಸ್ವಿಯಾದನು. ಉತ್ತರಕೋಸಲಾಧಿಪತಿಯಾಗಿಯೂ, ಸೂರ್ಯವಂಶ ವಿಭೂಷಣನಾಗಿಯೂ, ಸೋಮಯಾಜಿಯಾಗಿಯೂ ಇರುವ ಈಹಿರಣ್ಯನಾಭನಿಗೆ ಚಂದ್ರನಂತೆ ಆಹ್ಲಾದಕರನಾಗಿಯೂ, ಅದ್ವಿತೀಯನಾಗಿಯೂ, ಇರುವ ಕೌಸಲ್ಯನೆಂಬ ಮಗನು ಹುಟ್ಟಿದನು ಕೀರ್ತಿಯಿಂದ ಬ್ರಹ್ಮಸಭೆಯವರೆಗೂ ಪ್ರಸಿದ್ಧನಾದ ಕೌಸಲ್ಯನು ಬ್ರಹ್ಮಜ್ಞಾನ ಸಂಪನ್ನನಾದ ಬ್ರಹ್ಮಿಷ್ಠನೆಂಬ ತನ್ನ ಮಗನನ್ನು ತನ್ನ ಅಧಿಕಾರದಲ್ಲಿ ನೇಮಿಸಿ ತಾನು ಬ್ರಹ್ಮರೂಪನಾಗಿ ಸದ್ಗತಿಯಂಪಡೆದನು. ಕುಲಶೇಖರನಾದ- ಆ ಬ್ರಹ್ಮಿಷ್ಠನು. ಸತ್ಸಂತಾನವುಳ್ಳವನಾಗಿ ಆಜ್ಞಾಚಿಹ್ನಿತವಾದ ಭೂಮಂಡಲವನ್ನು ನಿರುಪಾಧಿಕತೆಯಿಂದ ಬಹುಕಾಲ ಚೆನ್ನಾಗಿ ಆಳುತ್ತಿರಲು ಪ್ರಜೆಗಳೆಲ್ಲರೂ ಆನಂದಬಾಷ್ಪವನ್ನು

ಸುರಿಸುತ್ತಾ ಅಭಿನಂದಿಸಿದರು. ಪಿತೃ ಶುಶ್ರೂಷಾದಿಗಳಿಂದ ಪರಿಶುದ್ಧನಾಗಿ, ವಿಷ್ಣುವಿಗೆ ಸಮಾನವಾದ ಆಕಾರವುಳ್ಳ, ಕಮಲದಳ ಲೋಚನನಾದ ಪುಷ್ಯ ನೆಂಬ ಹೆಸರುಳ್ಳ ಅವನಪುತ್ರನು ತಮ್ಮ ತಂದೆಯಾದ ಬ್ರಹ್ಮಿಷ್ಠನನ್ನು ಪುತ್ರವಂತರಲ್ಲಿ ಅಗ್ರಗಣ್ಯನನ್ನಾಗಿ ಮಾಡಿದನು. ಮುಂದೆ ಇಂದ್ರನ ಸಖ ನಾಗುವ ಆಬ್ರಹ್ಮಿಷ್ಠನು ಸುಪುತ್ರನಾದ ಪುತ್ರನಿಂದ ತನ್ನ ಕುಲಪ್ರತಿಷ್ಠೆ ಯನ್ನು ಪಡೆದು ವಿಷಯಸುಖಪರಾಙ್ಮುಖನಾಗಿ ಪುಷ್ಕರ ತೀರ್ಥದಲ್ಲಿ ಸ್ನಾನಮಾಡಿ ದೇವತ್ವವನ್ನು ಹೊಂದಿದನು. ಪುತ್ರನ ಹೆಂಡತಿಯು ಪುಷ್ಯ ರಾಗಕ್ಕೆ ಸಮಾನವಾದಕಾಂತಿಯುಳ್ಳ ಪುಷ್ಯಶುದ್ಧ ಪೌರ್ಣಮಿಯಲ್ಲಿ ಪ್ರಸವಿ ಸಿದಳು. ಎರಡನೆಯಪುಷ್ಯನಕ್ಷತ್ರದಂತೆ ಹುಟ್ಟಿದ ಆಪುಷ್ಯನನ್ನು ನೋಡಿ ಪ್ರಜೆಗಳೆಲ್ಲರೂ ವೃದ್ಧಿಯನ್ನು ಹೊಂದಿದರು. ಮಹಾಶಯನಾದ, ಆ ಪುತ್ರನು ತನ್ನ ಮಗನಿಗೆ ರಾಜ್ಯಾಧಿಕಾರವನ್ನೊಪ್ಪಿಸಿ, ಜನ್ಮಭೀರುವಾಗಿ ಬ್ರಹ್ಮವಿ ದ್ಯಾವಿಶಾರದನಾದ ಜೈಮಿನಿಗೆ ಶಿಷ್ಯನಾಗಿ ಅವನಿಂದ ಯೋಗಶಾಸ್ತ್ರಾಭ್ಯಾ ಸಮಾಡಿ ಮುಕ್ತಿಯನ್ನು ಪಡೆದನು. ತರುವಾಯ ಪುಷ್ಯನಮಗನಾದ, ಧ್ರುವೋ ಪಮನಾದ ಧ್ರುವಸಂಧಿಯೆಂಬುವನು ಭೂಭಾರವನ್ನು ವಹಿಸಿದನು. ಶ್ರೇಷ್ಠ ನಾಗಿಯೂ, ಸತ್ಯಸಂಧನಾಗಿಯೂ ಇರುವ ಈ ಧ್ರುವಸಂಧಿಯೊಡನೆ ಇವ ನನ್ನು ಸಮಾಧಾನಮಾಡಿಕೊಳ್ಳುವುದಕ್ಕಾಗಿ ಬರುವ ಪರರಾಜರಿಗೆ ಸಂಧಿಯು ಸ್ಥಿರವಾಗುತ್ತಿದ್ದುದರಿಂದ ಧ್ರುವಸಂಧಿ ಎಂಬ ನಾಮವು ಇವನಿಗೆ ಅನ್ವರ್ಥ ವಾಗಿತ್ತು. ವಿಶಾಲನೇತ್ರನಾಗಿಯೂ, ಪುರುಷಶ್ರೇಷ್ಠನಾಗಿಯೂ ಇರುವ ಈ ಧ್ರುವಸಂಧಿಯು- ತನ್ನ ಮಗನಾದ ಪೂರ್ಣಚಂದ್ರನಂತೆ ಮನೋಹರ ನಾದ ಸುದರ್ಶನನೆಂಬುವನು- ಮಗುವಾಗಿದ್ದಾಗಲೇ ಈ ಧ್ರುವಸಂಧಿಯು ಬೇಟೆಗೆಹೋಗಿ ಅಲ್ಲಿ ಒಂದುಸಿಂಹದಿಂದ ಮರಣವನ್ನು ಹೊಂದಿದನು. ಇದನ್ನುತಿಳಿದು, ಮಂತ್ರಿಗಳೆಲ್ಲರೂ ಏಕಾಭಿಪ್ರಾಯವುಳ್ಳವರಾಗಿ, ಅನಾಥ ರಾಗಿಯೂ, ದೀನರಾಗಿಯೂ, ಇರುವ ಪ್ರಜೆಗಳನ್ನುನೋಡಿ ಕುಲಾಧಾರ ನಾದ ಆ ಸುದರ್ಶನನೆಂಬಬಾಲಕನನ್ನು ಯಥಾವಿಧಿಯಾಗಿ ಸಾಕೇತರಾಜನ ನ್ನಾಗಿ ಮಾಡಿದರು. ಪ್ರೌಢರಾಜನಿಲ್ಲದೆ ಬಾಲರಾಜನಿಂದ ಯುಕ್ತವಾದ ಆ ರಘುವಂಶವು ಬಾಲಚಂದ್ರಯುಕ್ತವಾದ ಆಕಾಶದಂತೆಯೂ, ಸಿಂಹದ ಮರಿಯುಳ್ಳ ಅರಣ್ಯದಂತೆಯೂ, ಕಮಲದಮೊಗ್ಗಿನಿಂದ ಕೂಡಿದ ಸರೋ

ಪರವಂತೆಯೂ ರಮ್ಯವಾಗಿತ್ತು. ಈ ಸುದರ್ಶನನು ಕಿರೀಟಧಾರಣೆಯನ್ನು ಮಾಡಿಕೊಂಡಾಗ ನೋಡಿದ ಪ್ರಜೆಗಳು ಮುಂದೆ ಇವನು ತಂದೆಗೆ ಸಮಾನವಾದ ಸಾಮರ್ಥ್ಯವುಳ್ಳವನಾಗಿ ಆಳುವನೆಂದು ಊಹಿಸಿದರು. ಅನಿಮಿಷ್ಟು ಚಿಕ್ಕದಾಗಿರುವ ಮೇಘವು ಎದುರುಗಾಳಿಯ ಸಹಾಯದಿಂದ ದಶದಿಕ್ಕುಗಳನ್ನೂ ವ್ಯಾಪಿಸುವುದಲ್ಲವೇ? ಮಾವಟಿಗನು ಹಿಡಿದುಕೊಂಡಿರಲು, ದಿವ್ಯವಾದ ಅಲಂಕಾರದೊಡನೆ ಆನೆಯಮೇಲೆ ಕುಳಿತು ರಾಜಮಾರ್ಗದಲ್ಲಿ ಬರುತ್ತಿರುವ ಈ ಸುದರ್ಶನನು– ಆರುವರ್ಷದವನಾದರೆ ೩ ರಾಜ್ಯಾಧಿಕಾರವುಳ್ಳವನಾದುದರಿಂದ ಪ್ರಜೆಗಳೆಲ್ಲರೂ ತಂದೆಯಂತೆ ಗೌರವದಿಂದ ನೋಡುತ್ತಿದ್ದರು. ಈತನು ಬಾಲನಾದುದರಿಂದ ತಂದೆಯು ಸಿಂಹಾಸನವು ತುಂಬಿರುವಂತೆ ಕುಳಿತುಕೊಳ್ಳಲು ಶಕ್ತನಾಗಲಿಲ್ಲ. ಸುವರ್ಣಚ್ಛಾಯೆಯಂತೆ ಹೊರಡುತ್ತಿರುವ ಕಾಂತಿಯು ವ್ಯಾಪ್ತಿಯಿಂದ ವಿಸ್ತಾರವಾದ ದೇಹದಿಂದ ಕುಳಿತು ಆ ಸಿಂಹಾಸನದಲ್ಲಿ ಪೂರ್ಣಭಾಗವನ್ನಾಕ್ರಮಿಸುತ್ತಿದ್ದನು. ಆ ಸಿಂಹಾಸನದಿಂದ ಕೆಳಕ್ಕೆ ಆ ದೊರೆಯ ಗಿಡ್ಡಾದ ಕಾಲುಗಳು ಸ್ವಲ್ಪವೇ ಇಳಿಯುವುದರಿಂದ ಪಾದಗಳನ್ನಿಟ್ಟುಕೊಳ್ಳುವುದಕ್ಕಾಗಿ ಮಾಡಿಟ್ಟಿರುವ ಸುವರ್ಣಪೀಠವನ್ನು ಮುಟ್ಟದೆಹೋಗಿದ್ದರೂ ಅಲಕ್ತಕರಸದಿಂದ ಚಿತ್ರಿತವಾಗಿರುವ ಆ ಪಾದಗಳಿಗೆ ನೃಪರು ತಮ್ಮ ಉನ್ನತವಾದ ಕಿರೀಟಗಳಿಂದ ನಮಸ್ಕರಿಸುತ್ತಿದ್ದರು. ರತ್ನವು ಚಿಕ್ಕದಾಗಿದ್ದರೂ ತೇಜೋವಿಶೇಷದಿಂದ ಮಹಾನೀಲವೆಂಬ ಶಬ್ದವುಹೇಗೆ ಸುಳ್ಳಾಗುವುದಿಲ್ಲವೋ,ಹಾಗೆ ಹುಡುಗನಾದರೂ ಮಹಾರಾಜನೆಂಬ ಪ್ರತೀತಿಯು ಈ ಸುದರ್ಶನನಲ್ಲಿ ಸರಿಯಾಗಿ ಅನ್ವಯಿಸಿತ್ತು. ಉಭಯಪಾರ್ಶ್ವಗಳಲ್ಲಿಯೂ ಚಾಮರವನ್ನು ಬೀಸುತ್ತಿರಲು, ಕಪೋಲಗಳಲ್ಲಿ ನೇಲುತ್ತಿರುವ ಕಾಕಪಕ್ಷಗಳುಳ್ಳ ಆ ಸುದರ್ಶನನ ಆಜ್ಞಾವಚನಕ್ಕೆ ಸಮುದ್ರಗಳ ಅಂಚಿನವರೆಗೆ ಎಲ್ಲಿಯೂ ಭಂಗವುಂಟಾಗುತ್ತಿರಲಿಲ್ಲ. ಬಾಲನೆಂದು ನಿರಾಕರಿಸದೆ ಪ್ರಜೆಗಳೆಲ್ಲರೂ ಆಜ್ಞಾಬದ್ಧರಾಗಿ ನಡೆಯುತ್ತಿದ್ದರು. ಸುವರ್ಣಪಟ್ಟಿಯಿಂದ ರಮ್ಯವಾಗಿರುವ ಫಾಲಪ್ರದೇಶದಲ್ಲಿ ದಿವ್ಯವಾದ ಕಸ್ತೂರಿಯ ತಿಲಕವನ್ನು ಧರಿಸಿಕೊಂಡು ಸ್ಮೇರಮುಖನಾಗಿ ಇರತಕ್ಕ ಆ ಸುದರ್ಶನನು, ಶತ್ರುಸ್ತ್ರೀಯರ ಮುಖಗಳಲ್ಲಿ ತಿಲಕಗಳು ಅಳಿಸಿಹೋಗುವಂತೆ ಮಾಡುತ್ತಿದ್ದನು. ಶಿರೀಷಪುಷ್ಪಕ್ಕಿಂತಲೂ ಪೆಚ್ಚಾಪ

ಸನ್ನಿಕುಮಾರ್ಗ್ಯವುಳ್ಳ ಆ ಸುದರ್ಶನನು ಭೂಷಣಗಳಿಂದಲೂ ಆಯಾಸವನ್ನು ಹೊಂದುತ್ತಿದ್ದವನಾದರೂ, ಬಹು ಭಾರವಾಗಿದ್ದ ಭೂಮಿಯನ್ನು ತನ್ನ ಸಾಮರ್ಥ್ಯಬಲದಿಂದ ಧರಿಸಿದನು. ಅಕ್ಷರಾಭ್ಯಾಸಕಾಲದಲ್ಲಿ ಎಲ್ಲಾ ಅಕ್ಷರಗಳನ್ನೂ ಕಲ್ತು ಕೇಳುವುದಕ್ಕಿಂತಲೂ ಮುಂಚೆಯೇ ದೊರೆಯು ವಿದ್ಯಾವಂತರ ಸಹವಾಸದಿಂದಲೆ ದಂಡನೀತಿಯ ಸಂಪೂರ್ಣಫಲವನ್ನು ಅನುಭವಿಸಿದನು. ಅನಂತರದಲ್ಲಿ ಆ ಶಾಸ್ತ್ರಾಭ್ಯಾಸವು ಅವನಿಗೆ ಸಂವಾದರೂಪವಾಗಿತ್ತು, ಸುದರ್ಶನನು-ಪ್ರೌಢನಾಗಿ ಬೆಳೆಯುವವರೆಗೂ ಆತನವಕ್ಷಃಸ್ಥಳವನ್ನು ಆಕ್ರಮಿಸಿನಿಲ್ಲುವುದಕ್ಕವಕಾಶವಿಲ್ಲದಕಾರಣ ರಾಜ್ಯಲಕ್ಷ್ಮಿಯು ಲಜ್ಜಿತಳಾಗಿ ಛತ್ರಛಾಯೆಯೆಂಬ ನೆವದಿಂದ ಅವನ ದೇಹವನ್ನು ಆಲಿಂಗಿಸಿದಳು. ಮೌರ್ವೀಘರ್ಷಣೆಯಿಂದ ಜಡ್ಡುಗಟ್ಟಿದ ಗುರುತಿಲ್ಲದಿದ್ದರೂ, ಖಡ್ಗದ ಹಿಡಿಯನ್ನು ಸ್ಪರ್ಶಮಾಡದಿದ್ದರೂ, ನಗದಂತೆ ಕಠಿನವಾಗಿಯೂ ಉದ್ದವಾಗಿಯೂ ಇಲ್ಲದಿದ್ದರೂ ತೇಜೋವಿಶೇಷದಿಂದಲೇ ಅವನ ಭುಜವು ಭೂಮಿಯನ್ನು ಪಾಲಿಸುವುದಕ್ಕೆ ಅರ್ಹವಾಗಿತ್ತು, ಕೆಲವುಕಾಲವು ಕಳೆಯುತ್ತಾ ಬರಲು ಆತನ ಶರೀರಾವಯವಗಳುಮಾತ್ರ ವೃದ್ಧಿಯಾಗಲಿಲ್ಲ. ಲೋಕಪ್ರಿಯಗಳಾಗಿಯೂ, ಪ್ರಾರಂಭದಲ್ಲಿ ಸ್ವಲ್ಪವಾಗಿಯೂ, ವಂಶಯೋಗ್ಯಗಳಾಗಿಯೂ ಇರುವ ಶೌರ್ಯೌದಾರ್ಯಾದಿ ಗುಣಗಳೂ ವಿಸ್ತಾರವಾದವು. ಪೂರ್ವಜನ್ಮಗಳಲ್ಲಿ ಚೆನ್ನಾಗಿ ಅಭ್ಯಾಸಮಾಡಿದ್ದು ಈಗ ಅವನ್ನು ಸ್ಮರಿಸಿಕೊಂಡನೋ ಎಂಬಂತೆ, ಗುರುವಿಗೆ ಸ್ವಲ್ಪವೂ ಕಷ್ಟವಿಲ್ಲದಂತೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗದ ಸಾಧನೆಗೆ ಮೂಲವಾದ ಆನ್ವೀಕ್ಷಕಿ, ದಂಡನೀತಿ, ವಾರ್ತೆಗಳೆಂಬಮೂರುವಿದ್ಯೆಗಳನ್ನೂ, ಪ್ರಜೆಗಳನ್ನೂ ಸ್ವಾಧೀನಮಾಡಿಕೊಂಡನು. ಅವನು ಧನುರ್ವಿದ್ಯಾಭ್ಯಾಸಮಾಡುವಕಾಲದಲ್ಲಿ ದೇಹದ ಮುಂಭಾಗವನ್ನು ಹಿಂದಕ್ಕೆ ಮಾಡಿಕೊಂಡು, ತಲೆಕೂದಲುಗಳನ್ನು ಮೇಲಕ್ಕೆತ್ತಿಕಟ್ಟಿ, ಎಡದ ಮೊಣಕಾಲನ್ನು ಸ್ವಲ್ಪ ಬಗ್ಗಿಸಿಕೊಂಡು ಕಿವಿಯವರೆಗೂ ಸೆಳೆದು ಹಿಡಿದಿರುವ ಬಾಣದಿಂದ ಕೂಡಿದ ಧನುಸ್ಸುಳ್ಳವನಾಗಿ ಪ್ರಕಾಶಿಸುತ್ತಿದ್ದನು. ಆ ಸುದರ್ಶನನು- ಸ್ತ್ರೀಯರು ನೇತ್ರಗಳಿಂದ ಪಾನಮಾಡುವುದಕ್ಕೆ ಯೋಗ್ಯವಾದ ಮಧುವಿನಂತೆಯೂ, ಅನುರಾಗವೆಂಬ ಚಿಗುರುಗಳುಳ್ಳ ಮನ್ಮಥನೆಂಬ ವೃಕ್ಷದ ಪುಷ್ಪದಂತೆಯೂ, ಸರ್ವಾವಯವಗಳಿಗೂ ಸ್ವಾಭಾವಿಕವಾದ ಆಭರ

ಣದಂತೆಯೂ ಮೊದಲನೆಯ ವಿಲಾಸಸ್ಥಾನವಾಗಿಯೂ ಇರುವ ಯೌವನವನ್ನು ಪಡೆದು ಶೋಭಿಸುತ್ತಿದ್ದನು. ಅನುರೂಪೆಯರಾದ ಕುಲಕನ್ಯೆಯರನ್ನು ನೋಡಿಕೊಂಡು ಬರಬೇಕೆಂದು ಹೇಳಿ ಕಳುಹಿಸಿಕೊಟ್ಟಿದ್ದ ದೂತಿಯರು ಹೋಗಿ ನೋಡಿ, ಅವರ ಚಿತ್ರಪಟಗಳನ್ನು ಬರೆದು ತಂದು ತೋರಿಸಿದುದಕ್ಕಿಂತಲೂ ಹೆಚ್ಚಿನ ಸೌಂದರ್ಯವತಿಯರನ್ನು ಮಂತ್ರಿಗಳು ಹುಡುಕಿಕೊಂಡು ಬರಲು ಆ ಕನ್ಯೆಯರು ಈ ಸುದರ್ಶನನನ್ನು ನೋಡಿ, ಆತನಿಗೆ ಮೊದಲು ಪತ್ನಿಯರಾಗಿದ್ದ ಶ್ರೀಭೂದೇವಿಯರಿಗೆ ತಾವು ಸಪತ್ನೀತ್ವವನ್ನು ಅಂಗೀಕರಿಸಿದರು ಎಂಬಲ್ಲಿಗೆ ಹದಿನೆಂಟನೆಯ ಸರ್ಗವು ಮುಗಿದುದು.

ಓಂ ಪರಮಾತ್ಮನೇ ನಮಃ

## ಹತ್ತೊಂಭತ್ತನೆಯ ಸರ್ಗಂ.

ಕಂದ ॥ ವರ ಸಚಿವರೊಳಿಟ್ಟು ಮಹೀ ।
ಭರಮಂ ಪುಗುತಗ್ನಿವರ್ಣನಾತ್ಮ ಪುರಮಂ ॥
ಉರೆ ವಿಷಯಾಸ್ಪದನಾಗಿರೆ ।
ಪರಿಪರಿಯಿಂತರ ವಿಲಾಸ ಪೊಂದುತ್ತಿರ್ದಂ ॥

ಶಾಸ್ತ್ರಜ್ಞರಲ್ಲಿ ಅಗ್ರಗಣ್ಯನಾದ ಸುದರ್ಶನನು, ಜಿತೇಂದ್ರಿಯನಾದ ಕಾರಣ ಅಗ್ನಿಯಂತ ಪ್ರಕಾಶವಾನನಾದ ಅಗ್ನಿವರ್ಣನೆಂಬ ತನ್ನಮಗನಿಗೆ ರಾಜ್ಯಾಭಿಷೇಕವನ್ನು ಮಾಡಿ ತನ್ನ ಮುಪ್ಪಿನಲ್ಲಿ ನೈಮಿಷಾರಣ್ಯವನ್ನು ಪ್ರವೇಶಿಸಿದನು. ಅಲ್ಲಿ ತೀರ್ಥಗಳೆಂದ ವಿಹಾರಯೋಗ್ಯಗಳಾದ ಸರಸ್ಸುಗಳನ್ನು, ದರ್ಭಾಸ್ತರಣಗಳಿಂದ ಹಾಸತೂಲಿಕಾತಲ್ಪವನ್ನೂ, ಪರ್ಣಶಾಲೆಯಿಂದ ಸೌಧವನ್ನೂ ಮರೆತು, ಫಲಾಪೇಕ್ಷಾರಹಿತವಾಗಿ ತಪಸ್ಸನ್ನು ಆರ್ಜಿಸುತ್ತಿದ್ದನು. ತನ್ನ ಭುಜಬಲದಿಂದ ಶತ್ರುನಿಗ್ರಹಮಾಡಿ ತನ್ನ ತಂದೆಯು ನಿಷ್ಕಂಟಕವಾಗಿ ಮಾಡಿದ್ದ ಭೂಮಿಯನ್ನು ಅಗ್ನಿವರ್ಣನು ಅನುಭವಿಸುವುದಲ್ಲದೆ ಕಂಟಕ ಶೋಧನಾದಿಗಳಿಂದ ಅನುಕೂಲಪಡಿಸಿಕೊಳ್ಳಬೇಕಾಗಿರಲಿಲ್ಲವಾಗಿ, ರಾಜ್ಯರಕ್ಷಣೆಯಲ್ಲಿ ಸ್ವಲ್ಪವೂ ಕಷ್ಟಪಡಲಿಲ್ಲ

ಇವನು ಕೆಲವು ವರ್ಷಗಳವರೆಗೆ ಕುಲೋಚಿತ ರಾಜ್ಯಭಾರ ನಿರ್ವಹಣಾ ಕಾರ್ಯದಲ್ಲಿದ್ದು ತರುವಾಯ ರಾಜ್ಯವನ್ನು ಮಂತ್ರಿಗಳಲ್ಲಿಟ್ಟು ಕಾಮುಕನಾಗಿ ವಿಷಯಾಸಕ್ತಿಯನ್ನು ಹೊಂದಿ ಸುಂದರಿಯರ ಅಧೀನವಾದ ಯೌವನಮುಳ್ಳವನಾಗಿ ಅಂತಃಪುರದಲ್ಲಿ ಕಾಲವನ್ನು ಕಳೆಯುತ್ತಿದ್ದನು. ಸರ್ವದಾ ಕಾಮುಕನಾಗಿ ಕಾಮಿನಿಯರ ಸಹವಾಸದಲ್ಲಿಯೇ ನಿರತನಾದ ಅಗ್ನಿವರ್ಣನ, ಮೃದಂಗಾದಿ ವಾದ್ಯ ವಿಶೇಷಗಳಿಂದ ಶಬ್ದಾಯಮಾನವಾಗಿರುವ ಭವನಗಳಲ್ಲಿ, ಸಾಧನ ಸಂಪತ್ತಿಯಿಂದ ಅಭಿವೃದ್ಧಿಯನ್ನು ಹೊಂದುತ್ತಿದ್ದ, ರಾಜ್ಯಾಧಿಕಾರದಲ್ಲಿದ್ದ ಕಾಲದಲ್ಲಿಉಂಟಾಗುತ್ತಿದ್ದ ಉತ್ಸವಕ್ಕಿಂತ ಹೆಚ್ಚಿನ ಉತ್ಸವವುಂಟಾಗಿ ಉತ್ಸವಪರಂಪರೆಗಳು ವೃದ್ಧಿಯಾದವು.

ವಿಷಯಸುಖರಹಿತನಾದ ಬಾಳು ಕ್ಷಣಕಾಲವನ್ನಾದರೂ ಸಹಿಸುವುದಕ್ಕೆ ಅಶಕ್ತನಾದ ಆ ಅಗ್ನಿವರ್ಣನು ಅಂತಃಪುರದಲ್ಲಿಯೇ ಸರ್ವದಾವಿಹರಿಸುತ್ತಿರುವನಾಗಿ, ದರ್ಶನ ಕುತೂಹಲದಿಂದ ಕಾದಿರುವ ಪ್ರಜೆಗಳ ಪ್ರಸಕ್ತಿಯನ್ನೇ ಅಪೇಕ್ಷಿಸಲಿಲ್ಲ. ಮಂತ್ರಿಗಳಮಾತಿನ ಗೌರವದಿಂದ ಯಾವಾಗಲಾದರೂ ಪ್ರಜೆಗಳ ಅಭಿಲಾಷೆಯಂತೆ ದರ್ಶನವನ್ನು ಕೊಟ್ಟರೂ, ಕಿಟಕಿಯ ಸಂದಿಯಲ್ಲಿಟ್ಟಿರುವ ತನ್ನ ಪಾದಗಳನ್ನು ಕಾಣಿಸುತ್ತಿದ್ದನೇ ಹೊರತು ಮುಖ ಸಂದರ್ಶನಕ್ಕೆ ಅವಕಾಶವನ್ನು ಕೊಡುತ್ತಿರಲಿಲ್ಲ. ಆತನ ಆಶ್ರಿತರಾದ ಸೇವಕರು- ವೃಂದವಾದ ನಖಗಳ ಕೆಂಬಣ್ಣದಿಂದ ವ್ಯಾಪ್ತವಾದಕಾರಣ, ಬಾಲ ಸೂರ್ಯನಕಿರಣಗಳ ಸಂಸ್ಪರ್ಶದಿಂದ ಆಗತಾನೆ ಬಿರಿಯುತ್ತಿರುವ ಪದ್ಮಕ್ಕೆ ಸಮಾನವಾಗಿರುವ ಆತನಪಾದಕ್ಕೆರಗಿ ಸೇವಿಸುತ್ತಿದ್ದರು. ಕ್ರೀಡಾಸರಸ್ಸುಗಳಲ್ಲಿರುವ ಕಮಲಗಳು, ಯುವತಿಯರ ಉನ್ನತ ಸ್ತನಗಳ ಸಂಕ್ಷೋಭೆಯಿಂದ ತೂಗಾಡುತ್ತಿರಲು, ಆ ಸರಸ್ಸುಗಳ ನೀರಿನಿಂದ ಆವೃತವಾಗಿರುವ ಗುಪ್ತಸುರತಗೃಹಗಳಲ್ಲಿ ಸ್ತ್ರೀಯರೊಡನೆ ವಿಹರಿಸುತ್ತಿದ್ದನು. ಆ ಪುಷ್ಕರಿಣಿಗಳಲ್ಲಿ. ಜಲಮಜ್ಜನದಿಂದ ತಮ್ಮ ನೇತ್ರಾಂಜನವು ತೊಳೆದು ಹೋಗಿರಲು, ಲಾಕ್ಷಾರಾಗಾದಿ ಲೇಪನಗಳಿಂದ ಪಾಟಲವರ್ಣವಾಗಿದ್ದ ಓಷ್ಠಪುಟಗಳ ಬಣ್ಣವು ಕರಗಿ ಹೋಗಿರಲು, ವಿಲಾಸಿನಿಯರು ಸ್ವಾಭಾವಿಕವಾದ ರಕ್ತವರ್ಣವಾಗಿರುವ ತಮ್ಮ ಮುಖಗಳಿಂದ ಆ ಅಗ್ನಿವರ್ಣನನ್ನು ಮತ್ತಷ್ಟು ಮೋಹಿಸುವಂತೆ ಮಾಡುತ್ತಿದ್ದರು. ಅಗ್ನಿವರ್ಣನು ಮನೋಹರವಾದ

ಮದ್ಯದ ಸೌರಭ್ಯದಿಂದ ಆಕರ್ಷಿಸುತ್ತಿರುವ ರಮ್ಯವಾದ ಪಾನಭೂಮಿಗೆ, ತನ್ನ ಸಹಚರಿಯರೊಡನೆ, ವಿಕಸಿತ ಕುಸುಮಗಳುಳ್ಳ ಕಮಲವನಕ್ಕೆ ಸಲಗವು ಹೊಗುವಂತೆ ಹೊಕ್ಕನು. ಅಂಗನೆಯರು ಅತಿಶಯವಾಗಿ ಮದಜನಕವಾದ ಆ ಅಗ್ನಿವರ್ಣನ ಮುಖಾಸವವನ್ನು ರಹಸ್ಯವಾಗಿ ಪಾನಮಾಡುವುದಕ್ಕೆ ಅಪೇಕ್ಷಿಸಿದರೂ ಕಾಮಿನೀಗಂಡೂಷ ಸೇಕಾಸವದಿಂದ ಬಕುಳ ವೃಕ್ಷಗಳು ಪುಷ್ಪಿತಗಳಾಗುವುವೆಂಬುದು ಶಾಸ್ತ್ರಸಿದ್ಧವಾದಕಾರಣ, ಆವೃಕ್ಷಗಳು-ಎಷ್ಟು ಆದರದಿಂದ ಗಂಡೂಷಸೇಕವನ್ನು ಸ್ವೀಕರಿಸುವುವೋ, ಅವಕ್ಕೆ ಸದೃಶವಾದ ಅಭಿಲಾಷೆಯಿಂದ ಆ ಸುಂದರಿಯರ ಮುಖಾಸವವನ್ನು ಪಾನಮಾಡುತ್ತಿದ್ದನು. ಮೃದುಮಧುರ ಧ್ವನಿಯುಳ್ಳ ವೀಣೆಯೂ, ಮನೋಹರವಾದ ಸಲ್ಲಾಪವುಳ್ಳ ಕಾಮಿನಿಯೂ, ಈ ಎರಡುವಸ್ತುಗಳೂ- ಆತನ ಉತ್ಸಂಗ ಭಾಗದಲ್ಲಿ ವಿಹಾರಕ್ಕೆ ಅರ್ಹಗಳಾಗಿದ್ದು, ಯಾವಾಗಲೂ ಆತನ ಅಂಕವನ್ನು ಅಶೂನ್ಯವಾಗಿ ಮಾಡಿದುವು.

ತನ್ನ ತೊಡೆಯಲ್ಲಿ ಕುಳಿತಿರುವ ವೀಣೆಯ ವಾದ್ಯದಿಂದಲೂ, ವಾಮಲೋಚನೆಯ ಗಾನದಿಂದಲೂ, ಕ್ರೀಡಿಸುತ್ತಿದ್ದನು. ವಾದ್ಯದಲ್ಲಿ ಕುಶಲನಾದ ಅಗ್ನಿವರ್ಣನು- ನೇಲಾಡುತ್ತಿರುವ ಪುಷ್ಪಮಾಲಿಕೆಯಿಂದ ಮನೋಹರನಾಗಿ ಮೃದಂಗವನ್ನುನುಡಿಸುತ್ತಾ ತನ್ನ, ಸಮೀಪದಲ್ಲಿರುವ ಭರತಶಾಸ್ತ್ರ ಶಿಕ್ಷಕರೆದುರಿಗೆ ನರ್ತನಮಾಡುತ್ತಾ, ಅಭಿನಯದಲ್ಲಿ ತಪ್ಪಿ ಹೋಗುತ್ತಿರುವ ನರ್ತಕಿಯರನ್ನು ಲಜ್ಜಿಸುವಂತೆ ಮಾಡುತ್ತಿದ್ದನು, ಮನೋಹರವಾದ ನಾಟ್ಯಾವಸಾನದಲ್ಲಿ, ಆಯಾಸದಿಂದುಂಟಾದ ಬೆವರಿನಿಂದ ನಶಿಸಿಹೋಗಿದ್ದ ತಿಲಕವುಳ್ಳ ಆನರ್ತಕಿಯರ ಮುಖವನ್ನು ಪ್ರೇಮಾತಿಶಯದಿಂದ ಬೀಸಿ,ತಾಪ ಪರಿಹಾರವನ್ನು ಮಾಡುತ್ತಿರುವ ವಾಯುವು, ಪಾನಮಾಡಿ, ಇಂದ್ರ ಕುಬೇರರಿಗಿಂತ ಉತ್ಕೃಷ್ಟವಾದ ಜೀವನವಂ ಪಡೆದಂತೆ ಭಾವಿಸುತ್ತಿದ್ದನು. ಅಗ್ನಿವರ್ಣನು ಬೇರೆಡೆಗಳಿಗೆಹೋಗಿ ತನಗೆ ಬೇಕಾದ ಹೊಸಹೊಸವಿಷಯಸುಖಗಳನ್ನೂ ಹುಡುಕಿ ಅನುಭವಿಸುತ್ತಿದ್ದನಾದಕಾರಣ ಸ್ತ್ರೀಯರು ಇವನ ಸಮಾಗಮದಲ್ಲಿ ಸಂಪೂರ್ಣ ಸಂಭೋಗಸುಖವನ್ನುಂಟುಮಾಡಿದರೆ ತೃಪ್ತನಾಗಿ ಅನ್ಯತ್ರ ದೃಷ್ಟಿಯುಳ್ಳವನಾಗುತ್ತಾನೆಂದು ಭಾವಿಸಿ ಅರ್ಧವಾದ ಸೌಖ್ಯವನ್ನು ತೋರಿಸುತ್ತಿದ್ದರೂ ಇವನು ಸುಂದರಿಯರನ್ನು ವಂಚಿಸಿ

ಅನ್ಯತ್ರ ಹೋಗುವಾಗ ವಂಚಿತರಾದ ಸ್ತ್ರೀಯರು ಚಿಗುರಿನಂತೆ ಮೃದುವಾಗಿ ಹೊಳೆಯುತ್ತಿರುವ ಬೆರಲನ್ನು ಅಲ್ಲಾಡಿಸುತ್ತಾ ಇರಲಿ ಇರಲಿ ಎಂದು ಸಾಧನೆಮಾಡುತ್ತಾ ತರ್ಜಿಸುವುದು, ಹುಬ್ಬುಗಂಟಿಕ್ಕಿ ವಕ್ರದೃಷ್ಟಿ ,ಯಿಂದ ನೋಡುವುದು, ಬಾರಿಬಾರಿಗೂ ಕಾಂಚಿಯನ್ನು ಸಡುವಿನಲ್ಲಿ ಬಿಗಿಯುವುದು ಮೊದಲಾದವುಗಳಮೂಲಕ ಅವನನ್ನು ದಂಡಿಸುತ್ತಿದ್ದರು. ಅಗ್ನಿವರ್ಣನು ಸರದಿಯಪ್ರಕಾರವಾಗಿ ಕಾಮಿನಿಯರ ಮನೆಗಳಿಗೆ ರಾತ್ರಿಯಲ್ಲಿ ದೂತಿಯರ ಹಿಂದೆಹೋಗುತ್ತಾ, ಅವರು ತನ್ನ ವಿಷಯದಲ್ಲಿ ಆತುರದಿಂದ ಹೇಳಿಕೊಳ್ಳುತ್ತಿರುವ ವಿಪ್ರಲಂಭವಚನಗಳನ್ನು ಕೇಳುತ್ತಿದ್ದನು. ಪಟ್ಟದರಸಿಯರ ಸಂಗದಲ್ಲಿಯೇ ಇರಬೇಕಾದ ಸಂದರ್ಭದಲ್ಲಿ, ಅಗ್ನಿವರ್ಣನು ದುರ್ಲಭರಾಗಿರುವ ವೇಶ್ಯಾಂಗನೆಯರ ಭಾವಚಿತ್ರವನ್ನು ಬರೆಯುತ್ತಾಇರುವಾಗ ಕೈಬೆವರಿನಿಂದ ಬಣ್ಣವನ್ನು ಬರೆವಕಡ್ಡಿಯು ಜಾರಿ ಬೀಳುತ್ತಿತ್ತು. ಸಪತ್ನಿಯರು ತಮ್ಮಲ್ಲಿ ಪ್ರಿಯನ ಅನುರಾಗವು ಹೆಚ್ಚಾಗಿರುವುದೆಂದು ಗರ್ವಿಸುತ್ತಾ ಮತ್ಸರವುಳ್ಳವರಾಗಲು, ಮನ್ಮಥನಿಕಾರವು ಹೆಚ್ಚಾಗಿರಲು, ತಮ್ಮ ದೋಷವನ್ನುಬಿಟ್ಟು ಮದನಮಹೋತ್ಸವವೆಂಬ ವ್ಯಾಜದಿಂದ ಅಗ್ನಿವರ್ಣನನ್ನು ಸಿಲ್ಕಿಸಿಕೊಂಡು ತಮ್ಮ ಮನೋರಥಗಳನ್ನು ಪೂರಯಿಸಿಕೊಳ್ಳುತ್ತಿದ್ದರು. ಈತನು ಪ್ರಾತಃಕಾಲದಲ್ಲಿ ಪ್ರೇಯಸಿಯರ ಬಳಿಗೆಬರಲು ಅವರು ಈತನರೀತಿಯನ್ನು ನೋಡಿ ಸಂಭೋಗಚಿಹ್ನೆಗಳನ್ನು ಕಂಡು ಕೋಪಗೊಳ್ಳಲು ಅವರನ್ನು ಪ್ರಾಂಜಲಿಯಾಗಿ ಪ್ರಸನ್ನೆಯರನ್ನಾಗಿ ಮಾಡಿಕೊಳ್ಳಲು, ಅವರು ಈತನಲ್ಲಿರುವ ಪ್ರಣಯಾತಿಶಯದಿಂದಲೇ ತಮ್ಮ ಕೋಪವನ್ನು ಬಿಟ್ಟು, ತಾವು ಕೋಪಗೊಂಡದ್ದಕ್ಕಾಗಿ ಪರಿತಾಪ ಪಡುತ್ತಿದ್ದರು.

ಅಗ್ನಿವರ್ಣನು ಸ್ವಪ್ನದಲ್ಲಿ ತಮ್ಮ ಸವತಿಯರನ್ನು ಕನವರಿಸಿಕೊಳ್ಳಲು ಆ ವಿಷಯವನ್ನು ಅವನಸಂಗಡ ತಿಳಿಸದೆ ಮಗ್ಗುಲಹಾಸಿಗೆಯಲ್ಲಿ ಸುರಿಸುತ್ತಿರುವ ಕಣ್ಣೀರಿನಿಂದಲೂ, ಕ್ರೋಧಾವೇಶದಿಂದ ಒಡೆದು ಹೋಗುತ್ತಿರುವ ಕೈಬಳೆಗಳಿಂದಲೂ, ಕೂಡಿದವರಾಗಿ ಬೇರೆಮಗ್ಗುಲಿಗೆ ತಿರುಗಿಕೊಳ್ಳೋಣವರಿಂದಲೇ ಪ್ರತೀಕಾರವನ್ನು ಮಾಡುತ್ತಿದ್ದರು. ದೂತಿಯರು ತೋರಿಸುತ್ತಿರುವ ಮಾರ್ಗದಲ್ಲಿ ಹೊರಟು, ಸಿದ್ಧಪಡಿಸಿರುವ ಪುಷ್ಪ

ಶಯನವುಳ್ಳ ಲತಾಗೃಹಗಳನ್ನು ಹೊಕ್ಕು, ಅಂತಃಪುರಸ್ತ್ರೀಯರ ಭಯ ದಿಂದ ನಡುಗುತ್ತಾ, ದಾಸೀಜನರೊಡನೆ ಸಂಭೋಗವನ್ನು ಮಾಡುತ್ತಿದ್ದನು ಅಗ್ನಿವರ್ಣನು ಸಮೀಪದಲ್ಲಿದ್ದ ಸುಂದರಿಯರನ್ನು ನೋಡಿ ಅವರನ್ನು ಅವರ ಹೆಸರಿನಿಂದ ಕರೆಯದೆ, ತನ್ನ ಪ್ರೇಮಕ್ಕೆ ಪಾತ್ರರಾದ ಬೇರೆ ಸ್ತ್ರೀಯರ ಹೆಸರಿನಿಂದ ಕರೆಯಲು, ಅವರು ನಿನ್ನ ಇಷ್ಟಸಖಿಯರ ಹೆಸರನ್ನು ನಾವು ಹೊಂದಿದೆವು. ಅವರ ಭಾಗ್ಯವನ್ನೂ ಹೊಂದಬೇಕೆಂಬ ಅಪೇಕ್ಷೆಯುಂ ಟಾಗುವುದು, ನಮ್ಮ ಮನಸ್ಸು ಲೋಲುಪವಾಗಿದೆ, ಏನಮಾಡೋಣ ; ಎಂದು ಹೆಸರನ್ನುತಪ್ಪಿ ಕೂಗಿದ ಆತನನ್ನು ಅಪಹಾಸ್ಯದಿಂದ ಜರೆದರು. ವಿಲಾಸವುಳ್ಳ ಆ ಅಗ್ನಿವರ್ಣನು ಮಲಗಿದ್ದು ಎದ್ದಮೇಲೆ, ಸ್ತ್ರೀಯತಿಲಕದ ಕುಂಕುಮಾದಿಗಳಿಂದ ಕೆಂಪುಬಣ್ಣವಾಗಿಯೂ, ಜಾರಿಬಿದ್ದಿರುವ ಪುಷ್ಪಮಾ ಲಿಕೆಯುಳ್ಳದ್ದಾಗಿಯೂ, ಕಿತ್ತುಬಿದ್ದಿರುವ ಮೇಖಲೆಯುಳ್ಳದ್ದಾಗಿಯೂ, ಅಲಕ್ತಕ ರಸಚಿಹ್ನಿತವಾಗಿಯೂ ಇರುವ ಅವನ ಹಾಸಿಗೆಯು ಅವನು ಮಾಡಿದ ರತಿಕ್ರೀಡಾವಿಲಾಸ ಭೇದಗಳನ್ನು ಸ್ಪಷ್ಟವಾಗಿ ಸೂಚಿಸುತ್ತಿತ್ತು. ಅಗ್ನಿವರ್ಣನು ಸುಂದರಿಯರ ಪಾದಗಳಿಗೆ ಅಲಕ್ತಕರಸಲೇಪದಿಂದ ತಾನೇ ಚಿತ್ರವನ್ನು ಬರೆಯುತ್ತಿದ್ದನು. ಪ್ರಿಯನ ಹಸ್ತಸ್ಪರ್ಶದಿಂದ ಆ ಕಾಮಿನಿ ಯರ ನಡುವಿನಿಂದ ವಸ್ತ್ರವು ಜಾರಲು ಅವರನಿತಂಬಾದಿ ಪ್ರದೇಶವು ಇವನ ದೃಷ್ಟಿಯನ್ನಾಕರ್ಷಿಸಿದವು. ಅದರಿಂದ ಅವಧಾನತೆತಪ್ಪಿ ಚೆನ್ನಾಗಿ ರಸಲೇಪ ರಚನಯನ್ನು ಮಾಡಲಾರದೆಹೋದನು. ಚುಂಬನಕಾಲದಲ್ಲಿ ಓಷ್ಟಪುಟ ವನ್ನು ತಿರುಗಿಸಿ ಕೊಳ್ಳುವುದು, ಮೇಖಲೆಯನ್ನು ಕಳಚುವಾಗ ಕೈಯನ್ನು ತಡೆಯುವುದು, ಹೀಗೆ ಎಲ್ಲದರಲ್ಲಿಯೂ ಆ ಅಗ್ನಿವರ್ಣನ ಇಚ್ಛಾವಿಘ್ನವನ್ನುಂ ಟುಮಾಡುತ್ತಿದ್ದಾಗ್ಯೂ, ಸ್ತ್ರೀರತ್ನವು ಅವನಿಗೆ ಕಾಮೋದ್ದೀಪಕವಾಗಿಯೇ ಇತ್ತೇಹೊರತು, ಉದ್ವೇಗಕಾರಿಯಾಗಲಿಲ್ಲ ಕನ್ನಡಿಯನ್ನಿಟ್ಟುಕೊಂಡು ಸಂಭೋಗಚಿಹ್ನೆಗಳನ್ನು ನೋಡಿ ಕೇಳುತ್ತಿರುವ ಸ್ತ್ರೀಯರ ಹಿಂದೆಯೇ ಬಂದು ಹಾಸ್ಯಕ್ಕಾಗಿ ನಿಂತಿರಲು, ಇವನ ನಗೆಮೊಗದ ಪ್ರತಿಬಿಂಬವನ್ನು ನೋಡಿ ನಾಚಿಕೆಯಿಂದ ತಲೆಯನ್ನು ಬಗ್ಗಿಸಿಕೊಳ್ಳುತ್ತಿದ್ದರು.

ಆ ಸುಂದರಿಯರು ಹಾಸಿಗೆಯಿಂದ ಎದ್ದ ಅಗ್ನಿವರ್ಣನನ್ನು ತಮ್ಮೊ ಡನೆ ಆ ಶ್ಲೇಷವನ್ನು ಮಾಡಿಕೊಂಡು, ಮೆಟ್ಟುಂಗಾಲಿಟ್ಟು ಕೊಂಡು,

ರಾತ್ರಿಯ ಕೊನೆಯ ಭಾಗದಲ್ಲಿ ತಮ್ಮನ್ನು ಬಿಟ್ಟು ಹೋಗುವಕಾಲದ ಚುಂಬನವನ್ನೂ ಪ್ರಾರ್ಥಿಸುತ್ತಿದ್ದರು. ಅಗ್ನಿ ವರ್ಣನು ಕನ್ನಡಿಯಲ್ಲಿ ಇಂದ್ರ ಗಿಂತ ಮನೋಹರವಾದ ತನ್ನ ರಾಜ ಚಿಹ್ನೆಗಳನ್ನು ನೋಡಿ, ವ್ಯಕ್ತವಾಗಿ ತೋರುತ್ತಿರುವ ಸಂಭೋಗ ಚಿಹ್ನೆಯನ್ನು ನೋಡಿದಷ್ಟು ಹರ್ಷಗೊಳ್ಳು ತ್ತಿರಲಿಲ್ಲ. ಮಿತ್ರವಾಕ್ಯವನ್ನು ವ್ಯಾಜಮಾಡಿಕೊಂಡು ಅಲ್ಲಿ ನಿಲ್ಲುವುದಕ್ಕೆ ಇಷ್ಟಪಡದೆ ಅನ್ಯತ್ರ ಹೊರಡುತ್ತಿರುವ ಮಿತ್ರನಾದ ಅಗ್ನಿವರ್ಣನನ್ನು ಎಲೈ ಶಠನೇ! ನೀನು ತಪ್ಪಿಸಿ ಕೊಂಡು ಹೋಗುವುದಕ್ಕಾಗಿ ಹೇಳುವ ನೆವ ಗಳನ್ನು ನಾವು ಬಲ್ಲೆವು ನಿಲ್ಲು, ಎಂದು ಅವನ ತಲೆಯ ಕೂದಲನ್ನೂ ಹಿಡಿದೆಳೆದು ನಿಲ್ಲಿಸಿ ಕೊಳ್ಳುತ್ತಿದ್ದರು. ಗಾಢಪ್ರೀತಿಯಿಂದುಂಟಾದ ಶ್ರಮ ವನ್ನೂ ಪರಿಹರಿಸಿಕೊಳ್ಳುವುದಕ್ಕಾಗಿ, ಸುಂದರಿಯರು ಕಂಠಸೂತ್ರನೆಂಬ ಆ ಲಿಂಗನ ಭೇದವನ್ನು ವ್ಯಾಜ ಮಾಡಿಕೊಂಡು, ತಮ್ಮ ಉನ್ನತಸ್ತನಗಳ ಘರ್ಷಣೆಯಿಂದ ಅಳಿಸಿಹೋಗಿರುವ ಚಂದನವುಳ್ಳ ಅವನ ವಿಸ್ತಾರವಾದ ವಕ್ಷಸ್ಥಲದಲ್ಲಿ ಮಲಗುತ್ತಿದ್ದರು. ಅಗ್ನಿವರ್ಣನು ಸ್ತ್ರೀಸಂಸರ್ಗಕ್ಕಾಗಿ ರಾತ್ರಿ ಗೂಢನಾಗಿ ಸಂಚರಿಸುತ್ತಿದ್ದದ್ದನ್ನು ಗೂಢ ಚಾರಿಣಿಯರು ಬಂದು ತಿಳಿಸಲು' ಅಂಗನೆಯರು ಅವನೆದುರಿಗ ಬಂದು ಅಡ್ಡಗಟ್ಟಿ, ಎಲೈ ಕಾಮು ಕನೆ! ಕತ್ತಲೆಯಲ್ಲಿ ತಲೆಯನ್ನುಮರೆಯಿಸಿ ಕೊಂಡು ಎಲ್ಲಿಗ ಹೋಗುತ್ತೀಯೆ ಎಂದುಹಿಡಿದೆಳೆದು ತಮ್ಮಮನೆಗೆ ಕರೆತರುತ್ತಿದ್ದರು. ಆ ಅಗ್ನಿವರ್ಣನು ಚಂದ್ರ ಕಿರಣಗಳಂತೆ ಆಹ್ಲಾದ ಕರವಾಗಿರುವ, ನಾರಿಯರಸ್ಪರ್ಶಸುಖವನ್ನನುಭ ವಿಸುವವನಾಗಿ, ರಾತ್ರಿಯಲ್ಲೆಲ್ಲಾ ಎಚ್ಚತ್ತಿದ್ದು, ಹಗಲು ನಿದ್ರಿಸುತ್ತಿದ್ದ ಕಾರಣ ಕುಮುದಾಕರವಾದ ಸರೋವರದ ಸಾಮ್ಯವನ್ನು ಪಡೆದನು ದಂತಕ್ಷತ ದಿಂದ ಓಷ್ಠವು ಬಾಧೆ ಪಡುತ್ತಿರುವುದರಿಂದ ವೇಣು ವಾದ್ಯದ ಲ್ಲಿಯೂ, ನಖಕ್ಷತದಿಂದ ಉರೋಭಾಗವು ಬಾಧೆಪಡುತ್ತಿರುವುದರಿಂದ ವೀಣಾವಾದ್ಯದಲ್ಲಿಯೂ, ಬೇಸರವುಳ್ಳ ಗಾಯಿಕೆಯರು, ಆ ಅಗ್ನಿವರ್ಣನನ್ನು ಕುಟಿಲದೃಷ್ಟಿಯಿಂದ ಲೋಭಪಡಿಸುತ್ತಿದ್ದರು. ತನ್ನ ಪ್ರಿಯಸುಂದರಿಯರ ಲ್ಲಿರಹಸ್ಯವಾಗಿ, ಆಂಗಿಕ, ಸಾತ್ವಿಕ, ವಾಚಿಕವೆಂಬ ಮೂರುಬಗೆಯ ಅಭಿ ನಯಗಳನ್ನು ಕಲಿತು, ತನ್ನಸ್ನೇಹಿತರೊಡನ ವಿನೋದವಾಗಿ ಕುಳಿತಿರುವಾಗ ಅವರೆದ್ದು ಈ ಅಭಿನಯಗಳನ್ನು ಮಾಡಿತೋರಿಸುತ್ತಾ, ಅಭಿನಯಶಾಸ್ತ್ರ ಶಿಕ್ಷಕರಾದ ಭರತಾ ಚಾರ್ಯರೊಡನೆ ಚರ್ಚಿಸಿ ಆಕ್ಷೇಪಣೆ ಮಾಡುತ್ತಿದ್ದನು

ಕೊರಲಲ್ಲಿ ಜೋಲುತ್ತಿರುವ ಅರ್ಜುನಮುತ್ತು ಗಿರಿ ಮಲ್ಲಿಕಾ ಪುಷ್ಪಗಳಮಾಲಿಕೆಯುಳ್ಳವನಾಗಿಯೂ, ಕದಂಬ ಕುಸುಮಗಳ ಪರಾಗದ ಅಂಗ ರಾಗವುಳ್ಳವನಾಗಿಯೂ ಇರುವ ಆ ಅಗ್ನಿವರ್ಣನಿಗೆ, ವರ್ಷಾಕಾಲದಲ್ಲಿ ಕೃತಕಾಚಲಗಳಮೇಲೆ, ಮತ್ತಮಯೂರಗಳೊಡನೆವಿಹಾರವು ಸಂಭ್ರಮದಿಂದ ನಡೆಯುತ್ತಿದ್ದಿತು. ಆ ವರ್ಷಾಕಾಲದಲ್ಲಿ ಅಗ್ನಿವರ್ಣನು ಪ್ರಣಯ ಕಲಹದಿಂದ ತನ್ನಲ್ಲಿ ವಿಮುಖೆಯರಾದ ಸಖಿಯರನ್ನು ಸಮಾಧಾನ ಗೊಳಿಸುವುದಕ್ಕೆ ಆತುರಪಡುತ್ತಿರಲಿಲ್ಲ. ಗುಡುಗಿನ ಶಬ್ದಕ್ಕೆ ಹೆದರಿ ತನ್ನ ಭುಜಮಧ್ಯದಲ್ಲಿ ಅವಿತು ಕೊಳ್ಳುವುದಕ್ಕಾಗಿ ತಾವಾಗಿ ಅಭಿಮುಖಿಯರಾಗಿ ಬರುವುದನ್ನೂ ಅಪೇಕ್ಷಿಸುತ್ತಿದ್ದನು. ಅಗ್ನಿವರ್ಣನು ಹಿಮಬಾಧೆಯನ್ನು ಕಡಿಮೆಮಾಡುವುದಕ್ಕಾಗಿ ಮೇಲ್ಕಟ್ಟುಗಳನ್ನು ಕಟ್ಟಿ ಅಲಂಕರಿಸಿರುವ ಉಪ್ಪರಿಗೆಗಳಲ್ಲಿ ಸುಂದರಿಯರಾದ ಸ್ತ್ರೀಯರೊಡನೆ ಕಾರ್ತಿಕಮಾಸದ ರಾತ್ರಿಗಳಲ್ಲಿ ಕ್ರೀಡಿಸುತ್ತಿದ್ದು, ಮೇಘಾವೃತ ವಾಗದಿರುವುದರಿಂದ ಸ್ವಚ್ಛವಾಗಿರುವ ಬೆಳ್ದಿಂಗಳನಲ್ಲಿ ಸುರತಶ್ರಮೆಯನ್ನು ಪರಿಹಾರಮಾಡಿಕೊಳ್ಳುತ್ತಿದ್ದನು. ಆ ಉಪ್ಪರಿಗೆಯಗವಾಕ್ಷಗಳಲ್ಲಿ ನೋಡುತ್ತಿರಲು, ಮೇಖಲೆಯಂತೆ ರಮ್ಯವಾಗಿರುವ ಹಂಸಪಕ್ಷಿಗಳಿಂದ ಕೂಡಿದ ಸರಯೂನದಿಯ ಪುಳಿನ ಪ್ರದೇಶಗಳು ಪ್ರಿಯೆಯರ ನಿತಂಬಗಳಂತೆ ರಮ್ಯವಾಗಿ ಕಾಣಬರುತ್ತಿರಲು ಆ ಪ್ರಿಯೆಯರ ವಿಲಾಸಸೂಚಕಗಳಾದ ಆ ಪುಳಿನ ಪ್ರದೇಶಗಳನ್ನು ಬಹುಸಂಭ್ರಮದಿಂದ ನೋಡುತ್ತಿದ್ದನು. ಕಾಮಿನಿಯರು ಹಿಮದ ಶೈತ್ಯವನ್ನು ಹೋಗಲಾಡಿಸುವುದಕ್ಕಾಗಿ ಅಗುರು ಧೂಪದಿಂದ ಕಾಸಿರುವುದರಿಂದ ಗರಿಮುರಿಯಾಗಿರುವ ಸೀರೆಯನ್ನುಟ್ಟುಕೊಳ್ಳುವಾಗ, ಸ್ವರ್ಣಕಾಂಚೀದಾಮಗಳನ್ನು ತೆಗೆದಿಟ್ಟು ನೀವಿಯನ್ನು ಬಂಧಿಸುವುದು, ಸಡಲಿಸುವುದು, ಇವುಗಳಲ್ಲಿ ಆದರಾತಿಶಯವುಳ್ಳ ಅಗ್ನಿವರ್ಣನನ್ನು, ಆವಸ್ತ್ರದ ಶಬ್ದದಿಂದ ಬಂದೆಡೆ ಆ ಕರ್ಷಿಸುತ್ತಿದ್ದರು. ಗರ್ಭಾಗಾರಗಳಲ್ಲಿ ವಾಯುಸಂಚಾರವಿಲ್ಲದುದರಿಂದ ನಿಶ್ಚಲವಾಗಿ ನಿಂತಿರುವ ದೀಪಗಳೆಂಬ ದೃಷ್ಟಿಗಳುಳ್ಳವುಗಳಾಗಿಯೂ, ನಾನಾವಿಧ ಸುರತಕ್ರಿಯಾಭೇದಗಳಿಗೆ ಅವಕಾಶವುಳ್ಳವುಗಳಾಗಿಯೂ, ಇರುವ ಹೇಮಂತಋತುವಿನ ರಾತ್ರಿಗಳು ಆ ಅಗ್ನಿವರ್ಣನಿಗೆ ಸಾಕ್ಷಿಗಳಾಗಿದ್ದುವು. ಅಂಗನೆಯರು ದಕ್ಷಿಣಮಾರುತ ಸಂಚಾರದಿಂದ ವಿಕಸಿತವಾಗಿರುವ ಚೂತಮಂಜರಿಯನ್ನು ನೋಡಿ ಆ ಅಗ್ನಿವರ್ಣನ ದುಸ್ಸಹವಿಯೋಗವನ್ನು ಸಹಿಸಲಾರದೆ ತಾವಾಗಿ ಪ್ರಣಯ

ಕೋಪಗಳನ್ನು ಬಿಟ್ಟು ಪ್ರಸನ್ನತೆಯನ್ನು ಹೊಂದಿದರು. ಪ್ರಿಯಸುಂದರಿಯರನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ತೂಗುವುಣೆಯಲ್ಲಿಕುಳಿತು ಪರಿಜನರು ತೂಗಿಬಿಡಲು,ತಾನು ತೂಗುವುಣೆಯು ಹಗ್ಗಗಳುಕಿತ್ತುಹೋಗುವಷ್ಟುವೇಗವಾಗಿ ತೂಗುತ್ತಿದ್ದದ್ದರಿಂದ ಬಿದ್ದುಹೋದೇವೆಂಬ ಭಯವ್ಯಾಜದಿಂದ ಆ ಕಾಮಿನಿಯರು ಬಾಹುಗಳಿಂದಮಾಡುತ್ತಿರುವ ದೃಢವಾದ ಕಂಠಾ ಶ್ಲೇಷೆಗಳನ್ನುಹೊಂದಿ ಸ್ಪರ್ಶಸುಖವನ್ನನುಭವಿಸುತ್ತಿದ್ದನು.

ಸ್ತನಗಳಲ್ಲಿ ಚಂದನಲೇಪ ಮಾಡಿಕೊಳ್ಳುವುದು, ಮುಕ್ತಾಮಣಿಗಳುಳ್ಳ ಭೂಷಣಗಳನ್ನು, ಮರಕತಾದಿ ರತ್ನಗಳುಳ್ಳ ಕಾಂಚೀ ಕಲಾಪವನ್ನು ಧರಿಸುವುದು, ಮೊದಲಾದ ಗ್ರೀಷ್ಮಕಾಲಕ್ಕೆ ತಕ್ಕ ಶೈತ್ಯಸಂಪಾದಕ ವೇಷಗಳಿಂದ ಯುವತಿಯರು ಆ ಅಗ್ನಿವರ್ಣನನ್ನು ಸೇವಿಸುತ್ತಿದ್ದರು. ಅಗ್ನಿವರ್ಣನು ಮಾವಿನ ಚಿಗುರು, ಪಾದರಿಹೂ, ಇವುಗಳನ್ನು ಸೇರಿಸಿ ಶೀತವಾಗಿರುವ ಮದ್ಯವನ್ನು ಪಾನಮಾಡಿದನು. ಆದಕಾರಣ ವಸಂತಋತುವು ಕಳೆದ ತರುವಾಯ ಮುಂದ ವೀರ್ಯನಾದ ಅವನಕಾಮವು ಪುನಃ ಹೊಸದಾದಂತೆ ಪ್ರಬಲವಾಯ್ತು. ಹಿಗೇ ಅನಂಗಪ್ರೇರಿತನಾದ ಆ ಅಗ್ನಿವರ್ಣನು:- ಇತರಕಾರ್ಯಗಳಲ್ಲಿ ವಿಮುಖನಾಗಿ, ಇಂದ್ರಿಯ ಸುಖದಲ್ಲಿಯೇ ಮಗ್ನನಾಗಿ ಆಯಾಕಾಲಸೂಚನೆಗಳಿಂದ ತೋರಿಬರುತ್ತಿರುವ ಋತುಗಳ ಪರಂಪರೆಗಳನ್ನು ಕಳೆಯುತ್ತಿದ್ದನು. ಕಾಮಿನೀ ವ್ಯಸನನಾಗಿದ್ದರೂ ಶತ್ರುರಾಜರು ಪ್ರಭಾವಾತಿಶಯದಿಂದ ಆ ಅಗ್ನಿವರ್ಣನನ್ನು ಆಕ್ರಮಿಸಿಬಾರದೆ ಹೋದರು. ರತ್ಯಾಸಕ್ತಿಯಿಂದಾದ ರೋಗವು ದಕ್ಷಶಾಪವು ಚಂದ್ರನಿಗೆ ಕ್ಷಯರೋಗವನ್ನುಂಟು ಮಾಡಿದಂತೆ ಇವನನ್ನು ಕ್ಷೀಣನನ್ನಾಗಿ ಮಾಡಿತು. ವೈದ್ಯರ ಮಾತನ್ನು ಸ್ವಲ್ಪವೂ ಲಕ್ಷ್ಯಮಾಡದೆ ಆ ಅಗ್ನಿವರ್ಣನು- ಸ್ತ್ರೀಮದ್ಯಾದಿ ಸಂಗವಸ್ತುಗಳಿಂದ ರೋಗೋತ್ಪತ್ತಿಯಾಗುದೆಂದು ತಿಳಿದಿದ್ದರೂ ಅವುಗಳನ್ನು ಬಿಡಲಿಲ್ಲ. ಇಂದ್ರಿಯ ಸಮೂಹವು ರುಚಿಕರಗಳಾದ ವಿಷಯಗಳಿಂದ ಆಕ್ರಾಂತವಾದರೆ ಅವುಗಳಿಂದ ಬಿಡಿಸಿ ಕೊಳ್ಳುವುದು ಅಸಾಧ್ಯವಲ್ಲವೇ ! ಬಿಳುಪೇರಿದ ಮುಖವೂ, ಧರಿಸಲಶಕ್ತತೆಯಿಂದ ಅಲ್ಪಾಭರಣಧಾರಣೆಯೂ, ಪರರಹಸ್ತಾವಲಂಬನದಿಂದ ಸಂಚಾರವೂ, ಹೀನಸ್ವರವೂ, ಇವೇ ಮೊದಲಾದ ಕ್ಷಯರೋಗ ಸಂಬಂಧವಾದ ಕ್ಷೀಣತೆಯು, ಅವನ

ಕಾಮುಕಾ ವಸ್ಥೆಗೆ ತಕ್ಕಂತೆ ಇತ್ತು. ದೊರೆಯು ಹೀಗೆ ಕ್ಷಯರೋಗ ಗ್ರಸ್ತನಾಗಲು, ಆ ರಘುವಂಶವು, ಕೊನೆಯ ತಲೆಯೊಂದು ಮಾತ್ರವುಳ್ಳ ಚಂದ್ರಸಿರುವ ಆಕಾಶದಂತೆಯೂ, ಕೆಸರುಮಾತ್ರ ಉಳಿದಿರುವ ಬಣ ಹೊಂಡದಂತೆಯೂ, ಸ್ವಲ್ಪಗೆ ಉರಿಯುತ್ತಿರುವ ಸೊಡರಿನಂತೆಯೂ, ಕಾಂತಿ ರಹಿತವಾಗಿತ್ತು. ಅಗ್ನಿವರ್ಣನ ಮಂತ್ರಿಗಳು, ದೊರೆಗೆ ಏನೋ ರೋಗವಿ ರಬಹುದೆಂದು ಅನುಮಾನ ಪಡುತ್ತಿದ್ದ ಪ್ರಜೆಗಳಿಗೆ ಆತನ ಮಂತ್ರಿಗಳು ರೋಗವನ್ನು ಮುಚ್ಚಿ, ದೊರೆಯು ಸಂತಾನಾಪೇಕ್ಷೆಯಿಂದ ಜಪಾದಿಗ ಳನ್ನು ಮಾಡುತ್ತಿರುವನೆಂದು ಹೇಳುತ್ತಿದ್ದರು. ಆ ಅಗ್ನಿವರ್ಣನು ಅನೇಕಪತ್ನಿ ಯರುಳ್ಳವನಾದರೂ ಮಕ್ಕಳಿಲ್ಲದವನಾಗಿ, ವೈದ್ಯರ ಪ್ರತಿಕ್ರಿಯೆಗೆ ತಗ್ಗದ ರೋಗವನ್ನು ಹೊಂದಿ, ದೊಡ್ಡದೀಪವು ವಾಯುವನ್ನು ಅತಿಕ್ರಮಿಸಲಾ ರದಂತೆ ಆ ರೋಗಬಾಧೆಯನ್ನು ಪರಿಹಾರಮಾಡಿಕೊಳ್ಳಲಾರದೆ ರೋಗವಶ ವಾದನು. ಮಂತ್ರಿಗಳು ಮೃತನಾದ ದೊರೆಯ ಕಳೇಬರವನ್ನ ಅಪರ ಪ್ರಯೋಗಜ್ಞನಾದ ಪುರೋಹಿತನಮೂಲಕ, ಅರಮನೆಯ ಉಪವನದಲ್ಲಿ ರೋಗಶಾಂತಿ ಎಂಬವ್ಯಾಜದಿಂದ ಗೂಢವಾಗಿ ದಹಿಸಿದರು, ಮಂತ್ರಿಗಳು-ಪ್ರಮುಖರಾದ ಪ್ರಜೆಗಳನ್ನು ಕರೆಯಿಸಿ, ಅಗ್ನಿವರ್ಣನ ಪತ್ನಿ ಯೊಬ್ಬಳು ಗರ್ಭಿಣಿಯಾಗಿರುವುದನ್ನಕಂಡು, ಆಕೆಗೆ ರಾಜ್ಯಪಟ್ಟ ವನ್ನು ಕಟ್ಟಿದರು. ಈ ಪ್ರಕಾರವಾಗಿ ರಾಜನು ಮೃತನಾದನೆಂಬ ದುಃಖ ದಿಂದ ಸುರಿಸಿದ ಕಣ್ಣೀರುಗಳಿಂದ ಮೊದಲು ತಾಪವನ್ನು ಹೊಂದಿದ್ದ ಆಕೆಯ ಗರ್ಭವು, ರಾಜ್ಯಾಭಿಷೇಕಕ್ಕಾಗಿ ಸುವರ್ಣ ಕುಂಭಗಳಿಂದ ಸುರಿದ ಶೀತೋ ದಕದಿಂದ ತಾಪಶಾಂತಿಯನ್ನು ಹೊಂದಿತು. ರಾಣಿಗೆ ಪ್ರಸವ ಕಾಲವು ಯಾವಾಗ ಪ್ರಾಪ್ತವಾಗುವುದೋ ಎಂದು ನಿರೀಕ್ಷಿಸುತ್ತಿರುವ ಪ್ರಜೆ ಗಳ ಪುರೋಭಿವೃದ್ಧಿಗಾಗಿ, ಶ್ರಾವಣಮಾಸದಲ್ಲಿ ಬಿತ್ತಿದ ಬೀಜವನ್ನು ಭೂಮಿಯು ಹೇಗೆ ಗೋಪ್ಯವಾಗಿಟ್ಟು ಕೊಂಡಿರುವುದೋ ಹಾಗೆ ಆಗರ್ಭ ವನ್ನು ಧರಿಸಿರುವ ರಾಣಿಯು, ಆಪ್ತರಾದ ವೃದ್ಧಮಂತ್ರಿಗಳೊಡನೆ ಸಿಂಹಾ ಸನವನ್ನು ಹೊಂದಿ, ಪತಿಯ ಆಜ್ಞಾನುಸಾರವಾಗಿ ಕ್ರಮವಾಗಿ ರಾಜ್ಯ ವನ್ನು ಆಳುತ್ತಿದ್ದಳೆಂಬಲ್ಲಿಗೆ

ಹತ್ತೊಂಭತ್ತನೆಯ ಸರ್ಗವು ಪೂರ್ಣವಾದುದು.

ಶ್ರೀ,

# ವಿಕ್ರಯಕ್ಕೆ ಸಿದ್ಧವಾಗಿರುವ ಪುಸ್ತಕಗಳು.

| | |
|---|---|
| ಟೀಕಾ ತಾತ್ಪರ್ಯಸಹಿತ ಸುಂದರಕಾಂಡ ( ಅತ್ಯುತ್ತಮ ) | ೪-೦-೦ |
| ಈಶ, ಕೇನ, ಕಠೋಪನಿಷತ್ತಾತ್ಪರ್ಯಸಾರ ( ಸಮೂಲ ) | ೧ ೦-೦ |
| ಪ್ರಶ್ನ, ಮುಂಡಕ, ಶಿಕ್ಷಾವಲ್ಲಿಯ ತಾತ್ಪರ್ಯ(ಸಮೂಲ) | ೦-೧೨-೦ |
| ಶ್ರೀಶಂಕರಾಚಾರ್ಯರವರ ಚರಿತ್ರೆ | ೧-೦-೦ |
| ಸಂಧ್ಯಾವಂದನೆಯ ಅರ್ಥವಿಚಾರ ( ಋಗ್ವೇದ ) | ೦-೧೨-೦ |
| ಡಿಟ್ಟೋ ( ಯಜುರ್ವೇದ ) | ೦-೬-೨ |
| ಭಾರತದಲ್ಲಿನ ಯಕ್ಷಪ್ರಶ್ನೆ ( ಸಮೂಲ ತಾತ್ಪರ್ಯ ) | ೦-೪-೦ |
| ಕುಮಾರಸಂಭವಕಾವ್ಯ ೧ ಮತ್ತು ೨ ನೇ ಸರ್ಗ ಪದ, ಶಬ್ದ, ಅನ್ವಯ, ಅರ್ಥ, ತಾತ್ಪರ್ಯ, ಆಕಾಂಕ್ಷೆ ವಿಗ್ರಹ,ಧಾತುರೂಪ | ೧-೮-೦ |
| ರಘುವಂಶಕಾವ್ಯ ೧, ೨, ಮತ್ತು ೩ ನೇ ಸರ್ಗ | ೩-೦-೦ |
| ಡಿಟ್ಟೋ ೪ ಮತ್ತು ೫ ನೇ ಸರ್ಗ | ೧-೮-೦ |
| ಪಾಂಡವಗೀತೆ, ಹರಿಸ್ಮೃತಿ, ( ಟೀಕಾತಾತ್ಪರ್ಯ ) | ೧-೪-೧ |
| ಶ್ರೀ ಶಂಕರಾಚಾರ್ಯರವರ ವಿವೇಕ ಚೂಡಾಮಣಿ ಸಟೀಕ | ೨-೪-೦ |
| ಮುಕುಂದಮಾಲಾ ( ಟೀಕಾತಾತ್ಪರ್ಯ ) | ೦ ೪-೦ |
| ದೇವರಸೇವೆ (ಗದ್ಯ ಪದ್ಯ ರೂಪವಾಗಿದೆ. ) | ೦-೪-೧ |
| ದಶೋಪನಿಷತ್ತುಗಳು ಮೂಲ ( ಅತ್ಯುತ್ತಮ ) | ೧-೦-೦ |
| ಧರ್ಮಸಿಂಧುಸಾರ ) ಮೂಲಾನುಸಾರ ಕನ್ನಡ ) ೧, ೨ ನೆ ಪರಿಚ್ಛೇದಗಳು. | ೧ ೮-೦ |
| ಬಾಲಕರಭಂಡಾರ ( ಪ್ರಥಮರತ್ನ ಭಾಂಡ ) | |
| ಶಿವಾಪರಾಧ ಕ್ಷಮಾಪಣಸ್ತೋತ್ರ | ೦-೨-೦ |
| ರಘುಕುಲಚರಿತಂ ೧ನೇ ಸರ್ಗ ( ಕಾಳಿದಾಸನ ರಘುವಂಶದ ಕಥೆ. ) | ೧-೦-೦ |
| ಋಗ್ವೇದ ಬ್ರಹ್ಮಕರ್ಮ ( ಸಂಧ್ಯಾದಿ ) | ೦-೪-೦ |
| ಸೂರ್ಯನಮಸ್ಕಾರ | ೦-೨-೦ |
| ಶ್ರೀಹರಿ, ಕೃಷ್ಣ, ಶಿವ, ದೇವೀ, ರಾಮ, ಹನುಮನ್ನಾಮಾಮೃತ | ೦-೨-೧ |
| ರಾಘವೇಂದ್ರ ಸ್ತೋತ್ರ ಸಟೀಕ | ೦-೨-೦ |
| ಶಿವಪುರಾಣದ ಕಥೆ. | ೨-೪-೦ |
| ದೇವೀಭಾಗವತದ ಕಥೆ | ೨-೪-೦ |

ಡಿ. ಲಕ್ಷ್ಮೀನರಸಿಂಹಶಾಸ್ತ್ರಿ.

ಶಾರದಾ ಆಫೀಸ್,

ಸೀಗೆಬೇಲಿ, ಬೆಂಗಳೂರು ಸಿಟಿ.